# ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು

(ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಸಂಪ್ರಬಂಧ)


ಸಂಶೋಧಕರು
ಶ್ರೀಮತಿ ಭಾರತಿ.ಬಿ. ಪಾಟೀಲ
ವಾಣಿಜ್ಯಶಾಸ್ತ್ರ ಉಪನ್ಯಾಸಕಿ
ಜಿ.ಎ.ಕಲಾ.ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯ ಅಥಣಿ

ಮಾರ್ಗದರ್ಶಕರು
ಡಾ॥ ಸಿ. ಆರ್. ಗುಡಸಿ
ಅಧ್ಯಕ್ಷರು
ಅಭಿವೃದ್ಧಿ ಅಧ್ಯಯನ ವಿಭಾಗ.
ಶ್ರೀ. ಬಿ ಆರ್ ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ. ತಾಲ್ಲೂಕು ರಾಯಬಾಗ





ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ, ಹಾರೂಗೇರಿ.
ಜಿಲ್ಲೆ. ಬೆಳಗಾವಿ

# ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು

(ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು
ಶ್ರೀಮತಿ ಭಾರತಿ.ಬಿ. ಪಾಟೀಲ
ವಾಣಿಜ್ಯಶಾಸ್ತ್ರ ಉಪನ್ಯಾಸಕಿ
ಜೆ.ಎ.ಕಲಾ,ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯ ಅಥಣಿ




ಮಾರ್ಗದರ್ಶಕರು
ಡಾ॥ ಸಿ. ಆರ್. ಗುಡಸಿ
ಅಧ್ಯಕ್ಷರು
ಅಭಿವೃದ್ಧಿ ಅಧ್ಯಯನ ವಿಭಾಗ,
ಶ್ರೀ. ಬಿ.ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ತಾಲ್ಲೂಕು ರಾಯಬಾಗ



ಶ್ರೀ ಬಿ,ಆರ್. ದರೂರ ಸಂಶೋಧನ ಕೇಂದ್ರ, ಹಾರೂಗೇರಿ.
ಜಿಲ್ಲೆ. ಬೆಳಗಾವಿ

೨೦೦೮

## ಸಂಶೋಧಕರ ಪ್ರಮಾಣ ಪತ್ರ

---

*"ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು" ಎಂಬ ಸಂಪ್ರಬಂಧವನ್ನು ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಹಾರೂಗೇರಿಯ ಶ್ರೀ.ಬಿ.ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ॥ ಸಿ. ಆರ್. ಗುಡಸಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಪೂರ್ಣವಾಗಿ ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಪ್ರಕಟಿಸಿಲ್ಲವೆಂದು ಘೋಷಿಸುತ್ತೇನೆ.*

ಸಂಶೋಧನಾ ವಿದ್ಯಾರ್ಥಿನಿ

(ಶ್ರೀಮತಿ ಭಾರತಿ.ಬಿ.ಪಾಟೀಲ)

ಶ್ರೀ. ಬಿ. ಆರ್. ದರೂರ ಸಂಶೋಧನಾ
ಕೇಂದ್ರ, ಹಾರೂಗೇರಿ

## ಮಾರ್ಗದರ್ಶಕರ ದೃಢೀಕರಣ ಪತ್ರ

---

*ಭಾರತಿ. ಬಿ. ಪಾಟೀಲ ಇವರು "ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ. ಬಿ. ಅರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಎಂಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಪ್ರಕಟಿಸಿಲ್ಲವೆಂದು ಘೋಷಿಸುತ್ತೇನೆ.*

ಮಾರ್ಗದರ್ಶಕರು

(ಡಾ॥ ಸಿ. ಆರ್. ಗುಡಸಿ)

ಶ್ರೀ. ಬಿ. ಅರ್. ದರೂರ ಸಂಶೋಧನಾ

ಕೇಂದ್ರ, ಹಾರೂಗೇರಿ




ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟು ಮಾರ್ಗದರ್ಶನ ಮಾಡಿದ ಡಾ॥ ಸಿ.ಆರ್.ಗುಡಸಿ, ಶ್ರೀ. ಬಿ. ಅರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ, ಅವರಿಗೆ ನನ್ನ ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟು ಸಂಶೋಧನೆಯು ಸಕಾಲಕ್ಕೆ ಮುಕ್ತಾಯ ಮಾಡಲು ನೆರವು ನೀಡಿದ ಡಾ॥ ವ್ಹಿ.ಎಸ್. ಮಾಳಿ, ನಿರ್ದೇಶಕರು, ಶ್ರೀ. ಬಿ. ಅರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ, ಅವರಿಗೆ ನನ್ನ ಧನ್ಯವಾದಗಳು.

ಸಂಶೋಧನಾ ಪ್ರಬಂಧವು ಸಕಾಲಕ್ಕೆ ಪೂರ್ಣಗೊಳಿಸಲು ಎಲ್ಲಾ ರೀತಿಯ ನೆರವು ನೀಡಿ ಪ್ರೋತ್ಸಾಹಿಸಿದ, ನಮ್ಮ ಜಾಧವಾಜಿ ಶಿಕ್ಷಣ ಸಂಸ್ಥೆಯ ಕಾರ್ಯಾಧ್ಯಕ್ಷರಾದ ಅರವಿಂದ.ಬ.ದೇಶಪಾಂಡೆಯವರಿಗೆ ನಾನು ಕೃತಜ್ಞಳಾಗಿರುತ್ತೇನೆ.

ಸಂಶೋಧನಾ ಪ್ರಬಂಧವನ್ನು ಸಮಯಕ್ಕೆ ಸರಿಯಾಗಿ ಮುಗಿಸಲು ಸಲಹೆ ಸೂಚನೆಗಳನ್ನು ನೀಡಿ ಸಂಶೋಧನೆಯು ಉತ್ತಮವಾಗಿ ಮೂಡಿಬರಲು ಸಹಕರಿಸಿದ, ಡಾ॥ ಜಿ.ಟಿ.ರಾಮಣ್ಣ, ರಾಜ್ಯಶಾಸ್ತ್ರ ಉಪನ್ಯಾಸಕರು, ಜೆ.ಎ ಪದವಿ ಮಹಾವಿದ್ಯಾಲಯ ಇವರಿಗೆ ನನ್ನ ಕೃತಜ್ಞತೆಗಳು

ಸಂಶೋಧನೆಯ ಸಂದರ್ಭದ ಸಮಯದಲ್ಲಿ ಪ್ರತಿಯೊಂದು ಅಧ್ಯಾಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಸಂಶೋಧನೆಯು ಉತ್ತಮವಾಗಿ ರೂಪಗೊಳ್ಳಲು ಅನೇಕ ರೀತಿಯಲ್ಲಿ ಸಹಕರಿಸಿ ಪ್ರೋತ್ಸಾಹಿಸುತ್ತಾ

ನಿಗದಿತ ಸಮಯದಲ್ಲಿ ಸಂಶೋಧನೆಯನ್ನು ಪೂರ್ಣಗೊಳಿಸಲು ನೆರವಾದ ನನ್ನ ಸಹಪಾಠಿಗಳಾದ ಉಮಾ.ವಿ.ಪಾಖರೆ, ಅರ್ಥಶಾಸ್ತ್ರ ಉಪನ್ಯಾಸಕಿ, ಇವರಿಗೆ ನಾನು ಅಭಾರಿಯಾಗಿದ್ದೇನೆ.

ಸಂಶೋಧನೆಯ ಸಂದರ್ಭದ ಸಮಯದಲ್ಲಿ ಸಹಕಾರ ನೀಡಿದ ರುಕ್ಸಾನ ಶೈಕ್, ಸಮಾಜಶಾಸ್ತ್ರ ಉಪನ್ಯಾಸಕಿ, ಪ್ರೇಮಾನಂದ.ಬಿ, ಕನ್ನಡ ಉಪನ್ಯಾಸಕರು, ಜೆ.ಎ.ಪದವಿ ಮಹಾವಿದ್ಯಾಲಯ, ಕೆ.ಸಿ.ಸುರೇಶ, ಕನ್ನಡ ಉಪನ್ಯಾಸಕರು, ಎಸ್.ಎಂ.ಎಸ್ ಕಾಲೇಜು ಅಥಣಿ ಇವರಿಗೆ ನನ್ನ ಧನ್ಯವಾದಗಳು

ನನ್ನ ಸಂಶೋಧನೆಯ ಸಮಯದಲ್ಲಿ ನನ್ನೊಂದಿಗಿದ್ದು, ಸದಾ ಸಹಕರಿಸಿ ನಿಗದಿತ ಅವಧಿಯಲ್ಲಿ ಸಂಶೋಧನೆಯನ್ನು ಪೂರ್ಣಗೊಳಿಸಲು ಎಲ್ಲಾ ರೀತಿಯಿಂದ ನೆರವಾದ ಆರ್.ಎ. ನಾಯಿಕ, ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಜೆ.ಎ.ಪದವಿ ಮಹಾವಿದ್ಯಾಲಯ ಇವರಿಗೆ ನಾನು ಅಭಾರಿಯಾಗಿದ್ದೇನೆ.

ನನ್ನ ಸಂಶೋಧನೆಯ ಸಮಯದಲ್ಲಿ ಹಲವು ರೀತಿಯಲ್ಲಿ ಸಹಕರಿಸಿದ ಪ್ರಾಚಾರ್ಯರಾದ, ಆರ್.ಎಂ. ದೇವರೆಡ್ಡಿ ಹಾಗೂ ಶ್ರೀ ಬಿ.ಎಂ.ಕುಲಕರ್ಣಿ ಇವರಿಗೆ ನನ್ನ ಧನ್ಯವಾದಗಳು. ಅದೇ ರೀತಿ ನನ್ನ ಸಂಸೋಧನೆಗೆ ನೇರವಾಗಿ ಮತ್ತು ಪರೋಕ್ಷವಾಗಿ ನೆರವು ನೀಡಿದ ನನ್ನ ಕಾಲೇಜಿನ ಎಲ್ಲಾ ಸಹಪಾಟಿಗಳಿಗೆ, ಸಿಬ್ಬಂದಿ ವರ್ಗದವರಿಗೆ ನನ್ನ ಧನ್ಯವಾದಗಳು

ಪ್ರತಿಯೊಬ್ಬ ಪುರುಷನ ಏಳಿಗೆಯ ಹಿಂದೆ ಮಹಿಳೆ ಇರುತ್ತಾಳೆ ಎನ್ನುತ್ತಾರೆ. ಆದರೆ ಈ ಯಶಸ್ವಿಗೆ ಮತ್ತು ಬೆಳವಣಿಗೆಗೆ ಸದಾ ನನ್ನ ಬೆನ್ನು ತಟ್ಟಿ ಪ್ರೋತ್ಸಾಹಿತ್ತಿರುವ ಪತಿ ಅಶೋಕ. ಸು. ಸೂರಗೌಡ ಇವರಿಗೆ ನಾನು ಸದಾ ಚಿರಋಣಿ. ಹಾಗೆಯೇ ನನ್ನ ಮಗನಾದ ಅಖಿಲ್, ಅತ್ತೆಯಾವರಾದ ಇಂದಿರಾ. ಸೊ. ಸೂರಗೌಡ, ಮಾವನವರಾದ ಸೋಮಶೇಖರ್. ಎಸ್. ಸೂರಗೌಡ, ವಾಣಿ. ಎಸ್. ಯಶವಂತ್ ಮತ್ತು ವೀಣಾ. ಎಸ್. ಯಶವಂತ್ ಇವರಿಗೂ ನಾನು ಸದಾ ಚಿರಋಣಿ.

ಅರ್ಪಣೆ

ತಂದೆ ಮತ್ತು ತಾಯಿ

ಬಸಗೌಡ.ತ.ಪಾಟೀಲ

ಲಕ್ಷ್ಮೀ.ಬ.ಪಾಟೀಲ

| ಕ್ರ.ಸಂ | ಪರಿವಿಡಿ | ಪು.ಸಂ |
| --- | --- | --- |

| ಕ್ರ.ಸಂ | ಕೋಷ್ಠಕಗಳು | ಪು.ಸಂ |
|---|---|---|

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧) ಪೀಠಿಕೆ

೨) ಅಧ್ಯಯನದ ಉದ್ದೇಶ

೩) ಸಾಹಿತ್ಯ ಸಮೀಕ್ಷೆ

೪) ಸಂಶೋಧನೆಯ ಉದ್ದೇಶ

೫) ಸಂಶೋಧನಾ ವಿಧಾನ ಮತ್ತು ಮಾರ್ಗಗಳು

೬ )ಸಂಶೋಧನ ತಂತ್ರಗಳು

೭.೦) ಸಂಶೋಧನಾ ಕ್ಷೇತ್ರದ ಆಯ್ಕೆ

೭.೧) ಗ್ರಾಮಪಂಚಾಯತಿಗಳ ಆಯ್ಕೆ

೭.೧) ಗ್ರಾಮಗಳ ಆಯ್ಕೆ

೭.೨) ಸ್ವ ಸಹಾಯ ಸಂಘಗಳ ಆಯ್ಕೆ

೭.೩) ಸಂದರ್ಶನಾ ಅಭ್ಯರ್ಥಿಗಳ ಆಯ್ಕೆ

೭.೪) ಮಹಿಳಾ ಸ್ವ-ಸಹಾಯ ಸಂಘದ ಆಯ್ಕೆ

೭.೫) ಅಧ್ಯಯನಗಳ ವಿಂಗಡಣೆ.

# ಅಧ್ಯಾಯ ಎರಡು

# ಸಾಹಿತ್ಯ ಸಮೀಕ್ಷೆ

೨.೧ ಪೀಠಿಕೆ

೨.೨ ಸಾಹಿತ್ಯ ಸಮೀಕ್ಷೆ

೨.೩ ಉಪಸಂಹಾರ

೨.೪ ಅಡಿ ಟಿಪ್ಪಣಿ

## ಅಧ್ಯಾಯ ಮೂರು

## ಅಥಣಿ ತಾಲ್ಲೂಕಿನ ಪಕ್ಷಿನೋಟ ಮತ್ತು ಸಂದರ್ಶಿತ್ರರ ವಿವರ

೩.೧ ತಾಲ್ಲೂಕಿನ ಇತಿಹಾಸ

೩.೨ ಭೌಗೋಳಿಕ ಇತಿಹಾಸ

೩.೩ ಹವಾಮಾನ ಮತ್ತು ಮಳೆಯ ಸಾಂದ್ರತೆ

೩.೪ ನೈಸರ್ಗಿಕ ಸಂಪತ್ತು

೩.೫ ಖನಿಜ ಸಂಪತ್ತು

೩.೬ ಅರಣ್ಯ

೩.೭ ನದಿ ಮತ್ತು ತೊರೆಗಳು

೩.೮ ಮತ್ಸ್ಯ ಸಂಪನ್ಮೂಲ

೩.೯ ಪಶು ಪಾಲನೆ

೩.೧೦ ರೇಷ್ಮೆ ಸಾಗಾಣಿಕೆ

೩.೧೧ ಸಾರಿಗೆ

೩.೧೨ ಅಂಚೆ ಮತ್ತು ತಂತಿ ಕಛೇರಿ

೩.೧೩ ಬ್ಯಾಂಕಿಂಗ್

೩.೧೪ ಜನಸಂಖ್ಯೆ

೩.೧೫ ಸಾಕ್ಷರತೆ

೩.೧೬ ಕಾರ್ಮಿಕರ ಪ್ರಮಾಣ

೩.೧೭ ಆರೋಗ್ಯ

೩.೧೮ ಭೂಮಿಯ ಉಪಯೋಗ

೩.೧೯ ಭೂ ಹಿಡುವಳಿದಾರರು

೩.೨೦ ಕೈಗಾರಿಕೆ

೩.೨೧ ಪಂಚಾಯತ್ ಕಾರ್ಯ ನಿರ್ವಹಣೆ

೩.೨೨ ಸ್ವ-ಸಹಾಯ ಸಂಘಗಳು

೩.೨೩ ಸಂದರ್ಶಿತರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಹಿನ್ನಲೆ

೩.೨೪ ವಯಸ್ಸು

೩.೨೫ ವಯಸ್ಸಿನ ವಿವರಣೆ

೩.೨೬ ಕುಟುಂಬದ ವಿಂಗಡಣೆ

೩.೨೭ ಜಾತಿ

೩.೨೮ ಶಿಕ್ಷಣ

## ಅಧ್ಯಾಯ-೪

## ಮಹಿಳಾ ಸಬಲೀಕರಣ ಮತ್ತು ಸ್ವ-ಸಹಾಯ ಸಂಘಗಳು

೪.೧ ಪೀಠಿಕೆ

೪.೨ ಸಂಘದ ಸದಸ್ಯರ ವಯಸ್ಸು

೪.೩ ಸಾಕ್ಷರತೆ

೪.೩ ಸಂಘದ ರಚನೆ

೪.೪ ಸಂಘಗಳು ಮತ್ತು ಸಂಸ್ಥೆಗಳು

೪.೫ ಸಂಘದ ರಚನೆಯಿಂದ ಆಗಿರುವ ಪ್ರಯೋಜನಗಳು

೪.೬ ಉಳಿತಾಯ

೪.೭ ಸಂಘದ ಸದಸ್ಯರ ಆದಾಯ

೪.೮ ಕೌಟುಂಬಿಕ ವೆಚ್ಚ

೪.೯ ತರಬೇತಿ

೪.೧೦ ಸಹಾಯ ಧನ

೪.೧೧ ಸಹಾಯ ಧನದ ಪ್ರಮಾಣ

೪.೧೨ ಸಂಘದ ಸಭೆಯಲ್ಲಿ ಚರ್ಚಿಸಲ್ಪಡುವ ವಿಷಯಗಳು

೪.೧೩ ಸಾಲದ ವಿಧಾನಗಳು

೪.೧೫ ಸಾಲದ ಉದ್ದೇಶಗಳು

೪.೧೬ ಸಾಲ ಮರುಪಾವತಿ

೪.೧೭ ಸಂಘಗಳಲ್ಲಿನ ಸಮಸ್ಯೆಗಳು

೪.೧೮ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಂಬಂಧ

# ಅಧ್ಯಾಯ ಐದು

## ಸಾರಾಂಶ ಮತ್ತು ಸಂಶೋಧನೆಯಿಂದ ಕಂಡುಕೊಂಡ ಅಂಶಗಳು ಹಾಗೂ ಸಲಹೆಗಳು

೫.೧ ಸಾರಾಂಶ

೫.೨ ಸಂಶೋಧನೆಯಿಂದ ಕಂಡುಕೊಂಡ ಅಂಶಗಳು

೫.೨.೧ ವಯಸ್ಸು

೫.೨.೨ ಸಾಕ್ಷರತೆ

೫.೨.೩ ಸಂಘದ ರಚನೆ

೫.೨.೪ ಸಂಘದಿಂದ ಆಗಿರುವ ಪ್ರಯೋಜನಗಳು

೫.೨.೫ ಸಂಘದಲ್ಲಿನ ಉಳಿತಾಯ

೫.೨.೬ ಸದಸ್ಯರ ತಿಂಗಳ ಆದಾಯ

೫.೨.೭ ಸದಸ್ಯರ ತಿಂಗಳ ಖರ್ಚು

೫.೨.೮ ತರಬೇತಿ

೫.೨.೯ ಸಹಾಯ ಧನ

೫.೨.೧೦ ಸಾಲದ ನಿರ್ವಹಣೆ

೫.೨.೧೧ ಸಾಲದ ಉದ್ದೇಶಗಳು

೫.೨.೧೨ ಸಾಲ ಮರುಪಾವತಿ

೫.೨.೧೩ ಸಂಘಗಳ ಸಮಸ್ಯೆಗಳು

೫.೨.೧೪ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು

೫.೨.೧೫ ಸಲಹೆಗಳು

೫.೩ ಉಪಸಂಹಾರ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪೀಠಿಕೆ

ಬಡತನ ಮತ್ತು ನಿರುದ್ಯೋಗ, ಅಭಿವೃದ್ಧಿಯಲ್ಲಿ ಹಿಂದೆ ಉಳಿದಿರುವ ರಾಷ್ಟ್ರಗಳ ಪ್ರಮುಖ ಸಮಸ್ಯೆಗಳಾಗಿವೆ. ಭಾರತ ೫,೫೦,೦೦೦ ಕ್ಕಿಂತ ಹೆಚ್ಚು ಗ್ರಾಮಗಳನ್ನು ಒಳಗೊಂಡ ರಾಷ್ಟ್ರವಾಗಿದ್ದು, ಬಡತನ, ನಿರುದ್ಯೋಗ, ಅನಕ್ಷರತೆ, ಸಾಮಾಜಿಕ ಅಸಮಾನತೆ, ಕೃಷಿಯ ಮೇಲೆ ಅತಿಯಾದ ಅವಲಂಬನೆಯಂತಹ ಸಮಸ್ಯೆಗಳ ಜೊತೆಗೆ ನಮ್ಮ ರಾಷ್ಟ್ರದ ಅರ್ಧಕ್ಕಿಂತ ಹೆಚ್ಚು ಮಹಿಳೆಯರು ಯಾವುದೇ ಉದ್ಯೋಗ ಮಾಡದೆ ಮನೆಗಳಲ್ಲಿ ಗೃಹಿಣಿಯರಾಗಿ ಬದುಕುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಇಂತಹ ಸಮಸ್ಯೆಗಳು ನಿವಾರಣೆಯಾಗಬೇಕಾದರೆ ಹಾಗೂ ಸರ್ಕಾರಗಳ ಅಭಿವೃದ್ಧಿ ಯೋಜನೆಗಳು ಮತ್ತು ಅದಕ್ಕಾಗಿ ವ್ಯಯ ಮಾಡುವ ಹಣದ ಪ್ರಮಾಣ ಕಡಿಮೆಯಾಗಬೇಕಾದರೆ, ಸ್ವ ಸಹಾಯ ಸಂಘಗಳ ರಚನೆಯ ಮೂಲಕ ಮನೆಗಳಲ್ಲಿ ಗೃಹಿಣಿಯರಾಗಿ ಕಾಲಹರಣ ಮಾಡುತ್ತಿರುವ ಮಹಿಳೆಯರನ್ನು ಸಬಲೀಕರಣಗೊಳಿಸಬೇಕಾಗಿದೆ. ಇದರಿಂದ ಇದುವರೆಗಿನ ವಿವಿಧ ಯೋಜನೆಗಳ ಮೂಲಕ ಸಾಧಿಸಲಾಗದಿದ್ದನ್ನು ಕೆಲವೇ ವರ್ಷಗಳಲ್ಲಿ ಸಾಧಿಸಬಹುದು. ಆ ಮೂಲಕ ಸರ್ಕಾರದ ಜವಾಬ್ದಾರಿಗಳು ಕಡಿಮೆಯಾಗುತ್ತವೆ ಮತ್ತು ಯೋಜನೆಯ ವೆಚ್ಚ ಕಡಿಮೆಯಾಗುತ್ತದೆ. ಇದನ್ನು ಅರಿತು ನಬಾರ್ಡ, ಬ್ಯಾಂಕು, ಸರ್ಕಾರಗಳಿಗೆ, ಮಹಿಳೆಯರ ಸಬಲೀಕರಣಕ್ಕೆ ಹೆಚ್ಚು ಒತ್ತು ಕೊಡುತ್ತಾ ಬಂದಿವೆ.

ಮಹಿಳಾ ಸಬಲೀಕರಣ ರಾಷ್ಟ್ರಗಳ ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಒಂದು ಕೇಂದ್ರೀಯ ವಿಷಯವಾಗಿದೆ. ಭಾರತ ಸಂವಿಧಾನದ ಮೂಲಕ ಮತ್ತು ವಿವಿಧ ಕಾಯ್ದೆಗಳ ಮೂಲಕ ಮಹಿಳಾ ಸಬಲೀಕರಣಕ್ಕೆ ಪ್ರಯತ್ನಿಸುತ್ತಾ ಬಂದಿದೆ. ಒಂಭತ್ತನೇ (೧೯೯೭-೨೦೦೨) ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಸಬಲೀಕರಣವನ್ನು ಒಂದು ಪ್ರಮುಖ ವಿಷಯವನ್ನಾಗಿ ಅನುಮೋದಿಸಿತ್ತು ಮತ್ತು ೨೦೦೧ ನೇ ವರ್ಷವನ್ನು ಮಹಿಳಾ ಸಬಲೀಕರಣ ವರ್ಷವೆಂದು ಘೋಷಿಸಿತು.[೧] ಈಗಾಗಲೇ ಮಹಿಳಾ ಸಬಲೀಕರಣಕ್ಕೆ ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯನ್ನು ಸ್ಥಾಪಿಸಿರುವುದರ ಜೊತೆಗೆ ರಾಷ್ಟ್ರೀಯ ಮಹಿಳಾ ಆಯೋಗವನ್ನು, ಮಹಿಳೆಯರ ಅಭಿವೃದ್ಧಿಗಾಗಿಯೇ ಸ್ಥಾಪಿಸಲಾಯಿತು. ರಾಜ್ಯ ಸರ್ಕಾರಗಳು ಆಯೋಗಗಳನ್ನು ಸ್ಥಾಪಿಸಿದ್ದಲ್ಲದೆ, ರಾಷ್ಟ್ರೀಯ ಮಹಿಳಾ ಕೋಶ, ಇಂದಿರಾ ಮಹಿಳಾ

೧.ಉಮಾ ಜೋಷಿ, " ರೂರಲ್ ವುಮೆನ್- ಮೋರ್ ಪವರ್‌ಫುಲ್ ರೋಲ್", ಕುರುಕ್ಷೇತ್ರ, ಆಗಸ್ಟ್ ೧೯೯೭, ಪುಟ. ೯೪

ಯೋಜನಾ, ಮಹಿಳಾ ಸಮೃದ್ಧಿ ಯೋಜನೆ, ಸ್ತ್ರೀ ಶಕ್ತಿಯೋಜನೆ, ಹೀಗೆ ಹಲವಾರು ಯೋಜನೆಗಳನ್ನು ಜಾರಿಗೊಳಿಸಲಾಯಿತು. ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮೂರನೇ ಒಂದು ಭಾಗವನ್ನು ಮಹಿಳೆಯರಿಗೆ ಮೀಸಲಿಡಲಾಯಿತು. ಆ ಮೂಲಕ ಮಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸುಧಾರಣೆ ಮಾಡಲು ಪ್ರಯತ್ನಿಸಲಾಗುತ್ತಿದೆ. ಅಲ್ಲದೆ ಸರ್ಕಾರಗಳು ಮಹಿಳಾ ಸಬಲೀಕರಣಕ್ಕೆ ಹಲವಾರು ಕಾರ್ಯಕ್ರಮಗಳ ಮೂಲಕ, ಯೋಜನೆಗಳ ಮೂಲಕ ಪ್ರಯತ್ನಿಸುತ್ತಿದೆ. ಅಂತಹ ಕೆಲವು ಪ್ರಮುಖ ಪ್ರಯತ್ನಗಳನ್ನು, ಯೋಜನೆಗಳನ್ನು ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ಗುರುತಿಸಬಹುದು.

### ೧.೧ ಸ್ವಯಂ ಸಿದ್ಧ ಯೋಜನೆ

ಈ ಯೋಜನೆಯನ್ನು ಸ್ವ_ಸಹಾಯ ಸಂಘಗಳ ಮೂಲಕ ಮಹಿಳೆಯ ಅಭಿವೃದ್ಧಿಗಾಗಿಯೇ ಜಾರಿಗೊಳಿಸಲಾಗಿದೆ. ಅದರಂತೆ ಸ್ವ_ಸಹಾಯ ಸಂಘಗಳಿಗೆ ಚಿಕ್ಕ ಉದ್ದಿಮೆಗಳನ್ನು ಸ್ಥಾಪಿಸಲು ಹಣಕಾಸಿನ ನೆರವನ್ನು ನೀಡಲಾಗುತ್ತದೆ.

### ೧.೨ ಸ್ವ-ಶಕ್ತಿ ಯೋಜನೆ

ಈ ಯೋಜನೆಯನ್ನು ಕರ್ನಾಟಕದಂತಹ ಕೆಲವೇ ಕೆಲವು ರಾಜ್ಯಗಳು ಜಾರಿಗೊಳಿಸಿವೆ. ಈ ಯೋಜನೆಯ ಮೂಲಕ ಮಹಿಳೆಯರ ಆರೋಗ್ಯ, ಸಾಕ್ಷರತೆ ಮತ್ತು ಆರ್ಥಿಕ ಚಟುವಟಿಕೆಗಳನ್ನು ಕೈಗೊಳ್ಳಲು ಬೇಕಾದ ತಾಂತ್ರಿಕತೆಯನ್ನು ಒದಗಿಸಲಾಗುತ್ತಿದೆ.

### ೧.೩ ಮಹಿಳೆಯರಿಗಾಗಿ ಉದ್ಯೋಗ ಮತ್ತು ತರಬೇತಿ ಕಾರ್ಯಕ್ರಮ

ಈ ಕಾರ್ಯಕ್ರಮದ ಮೂಲಕ ಅಸಂಪ್ರದಾಯಿಕ ಕ್ಷೇತ್ರಗಳಲ್ಲಿನ ಬಡ-ನಿರ್ಗತಿಕ ಮಹಿಳೆಯರಿಗೆ ಹೊಸ ಜ್ಞಾನ ಮತ್ತು ತರಬೇತಿಯನ್ನು ನೀಡಲು ಪ್ರಯತ್ನಿಸಲಾಗುತ್ತದೆ. ತರಬೇತಿಯನ್ನು ಪಡೆದುಕೊಂಡ ನಂತರ ಉದ್ಯೋಗವನ್ನು ಕೈಗೊಳ್ಳಲು ಯೋಜನೆಯ ಮೂಲಕ ಹಣಕಾಸಿನ ನೆರವನ್ನು ನೀಡಲಾಗುವುದು. ಅಂತಹ ಕೆಲವು ತರಬೇತಿಗೆ ಸಂಬಂಧಿಸಿದ ಫೋಟೋ ಪ್ರತಿಯನ್ನು ಈ ಕೆಳಗೆ ನೀಡಲಾಗಿದೆ.

ಫೋಟೋ–೧

ಹೊಲಿಗೆ ತರಬೇತಿ



ಫೋಟೋ–೨

ಗೃಹೋದ್ಯೋಗ



## ೧.೪ ಸ್ವಧಾರ

ಈ ಕಾರ್ಯಕ್ರಮದ ಮೂಲಕ ವಿಧವೆಯರು ಮತ್ತು ಮಹಿಳಾ ಖೈದಿಗಳಿಗೆ ಯಾವುದೇ ಸಂಸ್ಥೆಯ ಬೆಂಬಲವಿಲ್ಲದೆ ಸಮಗ್ರ ಸೇವೆಯನ್ನು ಒದಗಿಸಲಾಗುವುದು.

## ೧.೫ ಸ್ತ್ರೀ ಶಕ್ತಿ

ಮಹಿಳಾ ಸಬಲೀಕರಣದಲ್ಲಿ ಅತ್ಯಂತ ಮಹತ್ವವಾದ ಯೋಜನೆಗಳಲ್ಲಿ, 'ಸ್ತ್ರೀ ಶಕ್ತಿ ಯೋಜನೆ' ಅತ್ಯಂತ ಮಹತ್ವವಾದ ಯೋಜನೆಯಾಗಿದೆ. ಈ ಯೋಜನೆಯಿಂದ ಮಹಿಳಾ ಸಬಲೀಕರಣಕ್ಕೆ ಹೆಚ್ಚು ಮಹತ್ವ ಬಂದಿದೆ. ಏಕೆಂದರೆ ಸ್ವ ಸಹಾಯ ಸಂಘಗಳು ಮಹಿಳಾ ಸಬಲೀಕರಣದ ಮೂಲಕ ಗ್ರಾಮೀಣ ಅಭಿವೃದ್ಧಿಯ

ಜೀವಾಳವಾಗಿವೆ. ಅಲ್ಲದೆ ಗ್ರಾಮೀಣ ಅಭಿವೃದ್ಧಿಗೂ ಮಹಿಳಾ ಸಬಲೀಕರಣಕ್ಕೂ ನೇರ ಸಂಬಂಧವಿದೆ. ಕಾರಣ ಗ್ರಾಮೀಣ ಪ್ರದೇಶದ ಮೂಲಭೂತ ಸಮಸ್ಯೆಗಳು ಪುರುಷರಿಗಿಂತ ಮಹಿಳೆಯರಿಗೆ ಚೆನ್ನಾಗಿ ತಿಳಿದಿರುತ್ತವೆ. ಅವರನ್ನು ಸ್ವ-ಸಹಾಯ ಸಂಘಗಳ ಮೂಲಕ ಸಬಲೀಕರಣಗೊಳಿಸಿದ್ದೇ ಆದರೆ, ಗ್ರಾಮೀಣ ಮಟ್ಟದ ಸಮಸ್ಯೆಗಳಿಂದ ಹೊರಬರಲು ಪ್ರಯತ್ನಿಸುವರಲ್ಲದೆ, ಬಡತನ ಮತ್ತು ನಿರುದ್ಯೋಗ ಸಮಸ್ಯೆಗಳು ತನ್ನಿಂದ ತಾನೇ ಕಡಿಮೆಯಾಗುವವು. ಇಲ್ಲವೆ ಸಂಪೂರ್ಣವಾಗಿ ನಿವಾರಣೆಯಾಗುವವು. ಇದನ್ನು ಅರಿತ ಸರ್ಕಾರ ೮ ನೇ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆ ಮತ್ತು ಅಭಿವೃದ್ಧಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿತು. ಮೊದಲ ಬಾರಿಗೆ ೧೯೭೫ ರಲ್ಲಿ ಮಹಮದ್ ಯುನೂಸ್ ಬಾಂಗ್ಲಾದ ಗ್ರಾಮೀಣ ಬ್ಯಾಂಕ್ ಮೂಲಕ ಸ್ವ-ಸಹಾಯ ಸಂಘಗಳನ್ನು ರಚಿಸಿದರು.[೨] ಇದೇ ನಿಟ್ಟಿನಲ್ಲಿ ಭಾರತದಲ್ಲಿ ಸ್ವ-ಸಹಾಯ ಸಂಘಗಳ ರಚನೆಗೆ ನಬಾರ್ಡ್ ಚಾಲನೆ ನೀಡಿತು. ಆದರೆ ಅದು ಪರಿಣಾಮಕಾರಿಯಾಗಿ ಜಾರಿಗೆ ಬಂದಿದ್ದು ೧೯೯೧-೯೨ ರ ನಂತರದ ಅವಧಿಯಲ್ಲಿ. ಭಾರತದಲ್ಲಿನ ಈ ರೀತಿಯ ಸ್ವ-ಸಹಾಯ ಸಂಘಗಳು ಬಾಂಗ್ಲಾದೇಶ, ಮಲೇಷಿಯಾ, ಕೊರಿಯಾ, ಫಿಲಿಫೈನ್ಸ್ ಮತ್ತು ಇಂಡೋನೇಷಿಯಾ ರಾಷ್ಟ್ರಗಳಲ್ಲಿನ ಮೈಕ್ರೊ-ಕ್ರೆಡಿಟ್ ಗುಂಪುಗಳ ಕಾರ್ಯವಿಧಾನವನ್ನೇ ಹೋಲುತ್ತವೆ.[೩]

ಭಾರತ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು, ಬ್ಯಾಂಕುಗಳು. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮತ್ತು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಇಂತಹ ವ್ಯವಸ್ಥಿತ ಪ್ರಯತ್ನದ ಫಲವಾಗಿ ೯೦ ಲಕ್ಷಕ್ಕಿಂತ ಹೆಚ್ಚು ಮಹಿಳಾ ಸ್ವ-ಸಹಾಯ ಗುಂಪುಗಳು ರಚಿತವಾಗಿದ್ದು, ಉಳಿತಾಯ ಮತ್ತು ಉದ್ಯೋಗದಲ್ಲಿ ನಿರತವಾಗಿವೆ. ಭಾರತ ಸರ್ಕಾರ ಸ್ವರ್ಣಜಯಂತಿ ಗ್ರಾಮೀಣ ಸ್ವ-ರೋಜಗಾರ್ ಯೋಜನೆ (ಎಸ್.ಜಿ.ಎಸ್.ವಾಯ್), ಡ್ವಾಕ್ರಾ, ಸ್ವಯಂ ಸಿದ್ಧ ಯೋಜನೆ, ಸ್ವಧಾರ, ಸ್ತ್ರೀ ಶಕ್ತಿ, ಸ್ವ-ಶಕ್ತಿ ಯೋಜನೆ- ಇನ್ನೂ ಮೊದಲಾದ ಯೋಜನೆಗಳ ಮೂಲಕ ಸಂಘಗಳ ರಚನೆ ಮಾಡಲು, ಉಳಿತಾಯವನ್ನು ಹೆಚ್ಚಿಸಿ ಉದ್ಯೋಗದಲ್ಲಿ ತೊಡಗುವಂತೆ ಮಾಡಲು ಸುತ್ತು ನಿಧಿಯನ್ನು ನೀಡಿ ಪ್ರೋತ್ಸಾಹಿಸಲು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಪ್ರಯತ್ನಿಸುತ್ತಾ ಬಂದಿದೆ.

---

೨. ನಜ್ಮಿನ್ ಇಸ್ಲಾಂ ಮತ್ತು ನಹಿದ್ ಸುಲ್ತಾನ್. "ರೋಲ್ ಆಫ್ ಎನ್.ಜಿ.ಓ ಇನ್ ಎಮ್‌ಪೋವರಿಂಗ್ ದ ವಲ್ನೆರಬಲ್ ವುಮೆನ್- ಎ ಸ್ಟಡಿ ಆನ್ ಅಸೋಸಿಯೆಷನ್ ಫಾರ್ ಕಮ್ಯುನಿಟಿ ಡೆವೆಲಪ್ಮಂಟ್" ಸು ಏಷಿಯನ್ ಅಫೈರ್ಸ್. ವಾಲ್ಯುಂ-೨೭, ನಂ.೪, ೨೪-೪೪, ಅಕ್ಟೋಬರ್- ಡಿಸೆಂಬರ್, ೨೦೦೫, ಪು.೨೫

೩. ಅಶರ್ಫಾಕುಮುದ್ ಗ್ರಾಸ್‌ರೂಟ್ ಆರ್ಗನೈಸೇಶನ್ ಅಂಡ್ ವಿಮೆನ್ಸ್ ಏಂಪವರ್‌ಮೆಂಟ್: ಸಂ ಇಶ್ಯೂಸ್ ಇನ್ ದ ಕಂಟೆಂಪರರಿ ಡಿಬೆಟ್, ಸಂಯ್ಯಾ ಶಕ್ತಿ, ವ್ಯಾಲ್ಯೂಂ.೬, ನ್ಯೂ ಡೆಲ್ಲಿ, ೧೯೯೨, ಪುಟ. ೩೪

ಅದೇ ರೀತಿ ಕರ್ನಾಟಕ ಸರ್ಕಾರ ಸ್ತ್ರೀ-ಶಕ್ತಿ ಗುಂಪುಗಳು ರಚಿತವಾಗಿ, ೧೯,೦೪೧೨೦ ಲಕ್ಷ ಮಹಿಳೆಯರು ಸದಸ್ಯತ್ವವನ್ನು ಹೊಂದಿದ್ದಾರೆ. ಒಟ್ಟು ೭೯೩೫ ಬ್ಯಾಂಕ್ ಖಾತೆಗಳನ್ನು ಬ್ಯಾಂಕುಗಳಲ್ಲಿ ಪ್ರಾರಂಭಿಸಿ ಬ್ಯಾಂಕುಗಳಲ್ಲಿ ಉಳಿತಾಯ ಮಾಡುತ್ತಾ, ಉಳಿತಾಯಕ್ಕೆ ಅನುಗುಣವಾಗಿ ಸಾಲವನ್ನು ಪಡೆದುಕೊಂಡಿದ್ದಾರೆ. ಅಥಣಿ ತಾಲ್ಲೂಕಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ಬ್ಯಾಂಕುಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ವತಿಯಿಂದ ೨೬೯೫ ಸಂಘಗಳು ರಚನೆಯಾಗಿವೆ. ೧೨. ೩೬ ಲಕ್ಷ ಉಳಿತಾಯವನ್ನು ಮಾಡಿವೆ ಮತ್ತು ಅಷ್ಟೇ ಪ್ರಮಾಣದಲ್ಲಿ ಸಾಲವನ್ನು ಪಡೆದುಕೊಂಡಿವೆ.

ಪ್ರಾರಂಭದಲ್ಲಿ ಮಹಿಳೆಯರ ಸ್ವ-ಸಹಾಯ ಸಂಘಗಳು ಆರ್ಥಿಕ ಮತ್ತು ಸಾಮಾಜಿಕ ಸಶಕ್ತತೆಯ ಕಡೆ ಇದ್ದರೂ ಸದೃಢವಾಗಿರಲಿಲ್ಲ. ಮಹಿಳೆಯರ ಗುಂಪುಗಳು ಸದೃಢವಾಗಿರಬೇಕಾದರೆ, ವಿವಿಧ ಸಂಘ ಸಂಸ್ಥೆಗಳ ಸಹಕಾರ ಮತ್ತು ಸಹಯೋಗ ಬಹಳ ಮುಖ್ಯ. ಅದಕ್ಕಿಂತ ಹೆಚ್ಚಾಗಿ ರಚಿತವಾದ ಸ್ವ-ಸಹಾಯ ಸಂಘಗಳಿಗೆ ಉಳಿತಾಯ, ಹಣಕಾಸು ನಿರ್ವಹಣೆ, ಸಾಲ ಸೌಲಭ್ಯ, ಉದ್ಯೋಗ ಮತ್ತು ಮಾರುಕಟ್ಟೆ ನಿರ್ವಹಣೆಗೆ ಸೂಕ್ತ ತರಬೇತಿ ನೀಡಿ ಮೇಲ್ವಿಚಾರಣೆ ಮಾಡಬೇಕಾಗಿದೆ. ಇದರ ಜೊತೆ ಜೊತೆಗೆ ಶಿಕ್ಷಣ, ರಾಜಕೀಯದ ಬಗ್ಗೆ, ಸಮಾಜದಲ್ಲಿನ ಅಸಮಾನತೆಯ ನಿರ್ಮೂಲನೆಯ ಬಗ್ಗೆಯೂ ತಿಳುವಳಿಕೆ ನೀಡಿ ಸದೃಢರನ್ನಾಗಿ ಮಾಡಬೇಕಾಗಿದೆ. ಆದರೆ ಹಲವಾರು ಕಾರಣಗಳಿಂದ ಮಹಿಳೆಯರ ಸಬಲೀಕರಣ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ಅದಕ್ಕೆ ಕಾರಣಗಳನ್ನು ಕಂಡುಕೊಂಡು ಪರಿಹಾರ ಕೈಗೊಳ್ಳಬೇಕಾಗಿದೆ.

## ೧.೬ ಸ್ವ-ಸಹಾಯ ಸಂಘಗಳ ರಚನೆ

ಸ್ವ-ಸಹಾಯ ಸಂಘಗಳು ಸದೃಢ ಸಂಘಗಳಾಗಿ ರೂಪಗೊಳ್ಳಬೇಕಾದರೆ ಅವುಗಳ ರಚನೆ ಅತ್ಯಂತ ಪ್ರಮುಖವಾದದು. ಈಗಾಗಲೇ ರೂಪಿತವಾಗಿರುವ ಸ್ವ-ಸಹಾಯ ಸಂಘಗಳು ೧೦ ರಿಂದ ೨೦ ಸದಸ್ಯರನ್ನು ಒಳಗೊಂಡು ರಚಿತವಾಗಿವೆ. ಇದರಲ್ಲಿ ಪ್ರತಿನಿಧಿ–೧ ಮತ್ತು ಪ್ರತಿನಿಧಿ–೨ ಎಂದು ಆಯ್ಕೆ ಮಾಡಲಾಗುತ್ತದೆ. ಇವರು ಸಂಘದ ವ್ಯವಹಾರಗಳನ್ನು ನೋಡಿಕೊಳ್ಳುತ್ತಾರೆ. ಆದರೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯ ವತಿಯಿಂದ ರಚಿತವಾಗಿರುವ ಸಂಘಗಳಲ್ಲಿ ಬಹುತೇಕ ಸಂಘಗಳ ವ್ಯವಹಾರವನ್ನು ಅಂಗನವಾಡಿ ಕಾರ್ಯಕರ್ತೆಯರೇ ನೋಡಿಕೊಳ್ಳುತ್ತಾರೆ. ಅಲ್ಲದೆ ಅನಕ್ಷರಸ್ಥ ಮಹಿಳೆಯರೇ ಇರುವ ಸಂಘಗಳು ಬೇರೆಯವರಿಗೆ ಹಣವನ್ನು ನೀಡಿ ದಾಖಲಾತಿಗಳನ್ನು ಬರೆಸುತ್ತಿವೆ. ಅಲ್ಲದೆ ಅನಕ್ಷರಸ್ಥ ಮಹಿಳೆಯರೇ ಇರುವ ಸ್ವ-ಸಹಾಯ ಸಂಘದ ಸದಸ್ಯರಿಗೆ ಸಂಘದ ವ್ಯವಹಾರಗಳೇ ಗೊತ್ತಾಗುವುದಿಲ್ಲ. ಅಲ್ಲದೆ ಇಂತಹ ಸಂಘಗಳಲ್ಲಿನ ಎಲ್ಲಾ ಸದಸ್ಯರು ಬಡತನ ರೇಖೆಯ ಕೆಳಗಿನವರಾಗಿಲ್ಲ ಮತ್ತು ಸಂಘಗಳು ವೈವಿಧ್ಯತೆಯಿಂದ ಕೂಡಿಲ್ಲ.

## ೧.೭ ಸ್ವ-ಸಹಾಯ ಸಂಘಗಳ ಉಳಿತಾಯ

ಸ್ವ-ಸಹಾಯ ಸಂಘಗಳ ರಚನೆಯ ಉದ್ದೇಶ ಉಳಿತಾಯ ಮತ್ತು ಸ್ವಯಂ ಉದ್ಯೋಗವನ್ನು ಮಾಡುವುದು. ಪ್ರತಿಯೊಂದು ಸಂಘಗಳ ಸದಸ್ಯರು ವಾರಕ್ಕೆ ಒಂದು ಬಾರಿ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಉಳಿತಾಯವನ್ನು ಮಾಡಿಕೊಳ್ಳುತ್ತಾರೆ. ಆದರೆ ಬಹುತೇಕ ಸಂಘಗಳು ಸಮಯಕ್ಕೆ ಸರಿಯಾಗಿ ಉಳಿತಾಯವನ್ನು ಮಾಡುವುದಿಲ್ಲ. ಅಲ್ಲದೆ ಉಳಿತಾಯದ ಪ್ರಮಣಾವೂ ಅತ್ಯಂತ ಕಡಿಮೆಯಾಗಿರುತ್ತದೆ. ಇದರಿಂದ ಸಂಘಗಳು ಬೇಗನೆ ಸಬಲೀಕರಣ ಹೊಂದಲು ಬೇಕಾದ ಉಳಿತಾಯವೇ ಇಲ್ಲವಾಗುತ್ತದೆ.

## ೧.೮ ಸ್ವ-ಸಹಾಯ ಸಂಘಗಳು ಮತ್ತು ಸಾಲ ಸೌಲಭ್ಯಗಳು

ಸ್ವ ಸಹಾಯ ಸಂಘಗಳು ಉಳಿತಾಯದ ಹಣವನ್ನು ತಮ್ಮ ತಮ್ಮ ಬ್ಯಾಂಕ್ ಖಾತೆಗೆ ಪಾವತಿಸಿ ಮರುದಿನ ಅದೇ ಹಣವನ್ನು ತಮ್ಮ ತಮ್ಮ ಸದಸ್ಯರಲ್ಲಿ ಸಾಲ ಬೇಕಾದವರಿಗೆ ಸಾಲವನ್ನು ನೀಡುತ್ತವೆ. ಆದರೆ ಸಾಲ ನೀಡುವಾಗ ನಿಯಮಗಳನ್ನು ಹಾಕಿಕೊಂಡು ನೀಡಬೇಕು. ಅಂದರೆ ಉದ್ಯೋಗಕ್ಕಾಗಿ ಶೇಕಡ ೭೦, ಕುಟುಂಬದ ವೆಚ್ಚಕ್ಕಾಗಿ ಶೇಕಡ ೧೦, ಆರೋಗ್ಯಕ್ಕಾಗಿ ಶೇಕಡ ೧೦, ಅಪತ್ಕಾಲಕ್ಕೆ ಶೇಕಡ ೧೦ ರಷ್ಟು ಹಣವನ್ನು ಮೀಸಲಿಟ್ಟುಕೊಂಡು ಸಾಲವನ್ನು ನೀಡಬೇಕು. ಯಾವ ಸಂಘಗಳೂ ಇಂತಹ ನಿಯಮಗಳನ್ನು ಹಾಕಿಕೊಂಡಿರುವುದಿಲ್ಲ. ಅದೇ ರೀತಿ ಬ್ಯಾಂಕುಗಳ ಮೂಲಕ ಹೈನುಗಾರಿಕೆಗಾಗಿ, ಉದ್ಯೋಗಕ್ಕಾಗಿ ಸಾಲವನ್ನು ಪಡೆದುಕೊಳ್ಳುತ್ತವೆ. ಆದರೆ ಬಹುತೇಕ ಸ್ವ-ಸಹಾಯ ಸಂಘಗಳು ಪಡೆದುಕೊಂಡ ಸಾಲವನ್ನು ಬೇರೆ ಮೂಲಗಳಿಗೆ ಬಳಸಿಕೊಳ್ಳುತ್ತವೆ. ಇನ್ನೂ ಕೆಲವು ಸಂಘದಲ್ಲಿನ ಮಹಿಳೆಯರು ಸಂಘದಲ್ಲಿ ಸಾಲವನ್ನು ಪಡೆದು ಬೇರೆಯವರಿಗೆ ಹೆಚ್ಚಿನ ಬಡ್ಡಿಗೆ ಕೊಡುವುದು ಸಾಮಾನ್ಯವಾಗಿದೆ. ಸೂಕ್ತ ಸಲಹೆ ಮತ್ತು ನಿಯಂತ್ರಣಗಳ ವ್ಯವಸ್ಥೆ ಇಲ್ಲದಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ.

## ೧.೯ ಸ್ವ-ಸಹಾಯ ಸಂಘಗಳು ಮತ್ತು ತರಬೇತಿ

ಸ್ವ-ಸಹಾಯ ಸಂಘಗಳು ಸಕಾಲಕ್ಕೆ ಉಳಿತಾಯ ಮಾಡಿ ಉದ್ಯೋಗ ಮಾಡುವುದರ ಮೂಲಕ ಸ್ವಾವಲಂಬಿಗಳಾಗಬೇಕಾದರೆ, ಸ್ವ-ಸಹಾಯ ಸಂಘಗಳಲ್ಲಿರುವ ಮಹಿಳೆಯರಿಗೆ ಸಮಯಕ್ಕೆ ಸರಿಯಾಗಿ ಉಳಿತಾಯ, ಹಣಕಾಸಿನ ನಿರ್ವಹಣೆ, ದಾಖಲಾತಿ ನಿರ್ವಹಣೆ, ಸಾಲ ಸೌಲಭ್ಯ ನೀಡುವ ವಿಧಾನ, ಉದ್ಯೋಗ ಮತ್ತು ಮಾರಾಟ ವಿಷಯಗಳ ಮೇಲೆ ಪರಿಣಾಮಕಾರಿಯಾದ ತರಬೇತಿಯನ್ನು ಪಡೆದುಕೊಳ್ಳಬೇಕು.

ಸರಿಯಾದ, ಪರಿಣಾಮಕಾರಿಯಾದ ತರಬೇತಿ ಸಕಾಲಕ್ಕೆ ದೊರೆಯದೇ ಹೋದರೆ ಸಂಘಗಳು ಸದೃಢವಾಗುವುದಿಲ್ಲ ಮತ್ತು ಮಹಿಳಾ ಸಬಲೀಕರಣವು ಸಾಧ್ಯವಾಗುವುದಿಲ್ಲ.

## ೧.೧೦ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು

ಸ್ವ-ಸಹಾಯ ಸಂಘಗಳ ರಚನೆ ಮತ್ತು ನಿರ್ವಹಣೆಯಲ್ಲಿ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಮಹತ್ತರ ಪಾತ್ರವಹಿಸಬಲ್ಲವು. ಆದರೆ ಬೆರಳೆಣಿಕೆಯಷ್ಟು ಸ್ವಯಂ ಸೇವಾ ಸಂಸ್ಥೆಗಳನ್ನು ಬಿಟ್ಟರೆ ಸ್ವ-ಸಹಾಯ ಸಂಘಗಳ ರಚನೆಯೇ ತಮ್ಮ ಆದಾಯಗಳ ಮೂಲ ಎನ್ನುವಂತೆ ವರ್ತಿಸುತ್ತಾ ವಿವಿಧ ಹೆಸರಿನಲ್ಲಿ ಸ್ವ-ಸಹಾಯ ಸಂಘಗಳಿಂದ ಹಣವನ್ನು ಪಡೆದುಕೊಳ್ಳುತ್ತವೆ. ಇದಕ್ಕೆ ಕಾರಣಗಳನ್ನು ಕಂಡುಕೊಳ್ಳಬೇಕಾಗಿದೆ.

## ೧.೧೧ ಸ್ವ- ಸಹಾಯ ಸಂಘಗಳು ಮತ್ತು ಬ್ಯಾಂಕುಗಳು

ಸ್ವ-ಸಹಾಯ ಸಂಘಗಳು ಸ್ವಾವಲಂಬಿಗಳನ್ನಾಗಿ ಮಾಡಿ ಮಹಿಳೆಯರನ್ನು ಸಬಲೀಕರಣಗೊಳಿಸುವಲ್ಲಿ ಬ್ಯಾಂಕುಗಳು ಕೇಂದ್ರೀಯ ಪಾತ್ರ ವಹಿಸಬಲ್ಲವು. ಆದರೆ ಪ್ರಾರಂಭದಲ್ಲಿ ಅತ್ಯಂತ ಉತ್ಸಾಹಭರಿತವಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮತ್ತು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಅಡಿಯಲ್ಲಿ ರಚಿತವಾಗುತ್ತಿದ್ದ ಮಹಿಳಾ ಸ್ವ-ಸಹಾಯ ಸಂಘಗಳಿಗೆ ಸಾಲ ಸೌಲಭ್ಯ ನೀಡುತ್ತಿದ್ದವು. ಆದರೆ ಬ್ಯಾಂಕುಗಳಿಗೂ ಸ್ವ-ಸಹಾಯ ಸಂಘಗಳನ್ನು ರಚನೆ ಮಾಡಲು ಜವಾಬ್ದಾರಿ ವಹಿಸಿದ ನಂತರ ಸ್ವಲ್ಪ ಪ್ರಮಾಣದಲ್ಲಿ ತನ್ನ ಅಡಿಯಲ್ಲಿ ರಚಿತವಾದ ಸಂಘಗಳನ್ನು ಹೊರತು ಪಡಿಸಿದರೆ ಇತರೆ ಸಂಘಗಳಿಗೆ ಸಾಲವನ್ನು ನೀಡುವಾಗ ವಿಳಂಬ ನೀತಿಯನ್ನು ಅನುಸರಿಸುತ್ತಿವೆ ಎನ್ನುವ ಮಾತಿದೆ.

## ೧.೧೨ ಸ್ವ-ಸಹಾಯ ಸಂಘಗಳು ಮತ್ತು ಸಮಸ್ಯೆಗಳು

ಸ್ವ-ಸಹಾಯ ಸಂಘಗಳು ರಚಿತವಾದರೆ ಗ್ರಾಮೀಣ ಮಟ್ಟದ ಬಡತನ ಮತ್ತು ನಿರುದ್ಯೋಗದಂತಹ ಸಮಸ್ಯೆಗಳು ನಿವಾರಣೆಯಾಗುವುದರ ಜೊತೆಗೆ ಸಂಘಗಳ ಸದಸ್ಯರ ಕೌಟುಂಬಿಕ ಸಮಸ್ಯೆಗಳೂ ನಿವಾರಣೆಯಾಗುತ್ತವೆ. ಸಂಘಗಳಲ್ಲಿನ ಸದಸ್ಯರಲ್ಲಿ ಬಹುತೇಕ ಸದಸ್ಯರು ಅನಕ್ಷರಸ್ಥರಾಗಿದ್ದಾರೆ. ಇದರಿಂದ ಸಂಘಗಳ ಸದಸ್ಯರ ನಡುವೆಯೇ ಹಲವಾರು ಸಮಸ್ಯೆಗಳು ಉದ್ಭವಿಸುತ್ತವೆ. ಅದಕ್ಕೆ ಕಾರಣಗಳನ್ನು ಕಂಡುಕೊಂಡು ಪರಿಹರಿಸದಿದ್ದರೆ ಸಂಘಗಳು ಸದೃಢ ಸಂಘಗಳಾಗಿ ರೂಪುಗೊಳ್ಳುವುದಿಲ್ಲ.

ಈ ಮೇಲಿನ ಅಂಶಗಳಲ್ಲಿನ ಪ್ರಸ್ತಾಪಿಸಿರುವ ವಿಷಯಗಳಿಗೆ ಸಂಬಂಧಿಸಿದಂತೆ ನಿಖರವಾದ ಕಾರಣಗಳನ್ನು ಕಂಡುಕೂಳ್ಳಬೇಕಾಗಿದೆ ಮತ್ತು ಅವುಗಳಿಗೆ ಸೂಕ್ತ ಪರಿಹಾರಗಳನ್ನು ಹುಡುಕಬೇಕಾಗಿದೆ. ಅದಕ್ಕಾಗಿ "*ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು*" ಎನ್ನುವ ವಿಷಯವನ್ನು ಆಯ್ಕೆಮಾಡಿಕೊಂಡು ಈ ಕೆಳಗೆ ತಿಳಿಸಿರುವ ಊಹೆಗಳು ಮತ್ತು ಉದ್ದೇಶಗಳನ್ನು ಆಧಾರವಾಗಿಟ್ಟುಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

## ೧.೧೩ ಪ್ರಾಕ್ ಕಲ್ಪನೆಗಳು ಅಥವಾ ಊಹೆಗಳು (Hypothesis)

ಸಂಶೋಧನೆಯ ಪೀಠಿಕೆಯಲ್ಲಿ ತಿಳಿಸಿರುವ ಅಂಶಗಳು ಮತ್ತು ಸಂಶೋಧನೆಯ ಧ್ಯೆಯೋದ್ದೇಶಗಳ ಆಧಾರದ ಮೇಲಿ ಈ ಕೆಳಗೆ ತಿಳಿಸಿದ ಪ್ರಾಕ್ ಕಲ್ಪನೆಗಳನ್ನು ಇಟ್ಟುಕೂಂಡು ಸಂಶೋಧೆನೆ ಮಾಡಲಾಗಿದೆ.

೧) ಸ್ವ ಸಂಘಗಳ ರಚನೆಯು ವೈವಿಧ್ಯತೆಯಿಂದ ಕೂಡಿಲ್ಲ.

೨) ಸ್ವ ಸಂಘಗಳ ಉದ್ಯೋಗದಲ್ಲಿ ತೊಡಗುವಲ್ಲಿ ನಿರಾಸಕ್ತಿ ವಹಿಸುತ್ತಿವೆ

೩) ಸಾಲ ಸೌಲಭ್ಯಗಳು ದೂರೆಯುತ್ತವೆ ಎನ್ನುವ ಒಂದೇ ಕಾರಣಕ್ಕಾಗಿ ಬಹಳಷ್ಟು ಸಂಘಗಳು ರೂಪಿತವಾಗಿವೆ.

೪) ಸಂಘಗಳಲ್ಲಿ ಒಗ್ಗಟ್ಟು ಕಂಡು ಬರುತ್ತಿಲ್ಲ.

೫) ಸಂಘಗಳನ್ನು ನಿರ್ವಹಿಸುವ ಸಂಸ್ಥೆಗಳು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ.

೬) ಸಂಘಗಳ ರಚನೆಯಿಂದ ಮಹಿಳೆಯರ ಕೆಲವು ಸಮಸ್ಯೆಗಳು ನಿವಾರಣೆಯಾಗಿವೆ

## ೧.೧೪ ಸಂಶೋಧನೆಯ ಉದ್ದೇಶ

ಸಂಶೋಧನೆಯ ಉದ್ದೇಶ ಮಹಿಳಾ ಸಬಲೀಕರಣದಲ್ಲಿ ಮಹಿಳಾ ಸ್ವ-ಸಹಾಯ ಸಂಘಗಳ ಕುರಿತು ಅಧ್ಯಯನ ಮಾಡುವುದು. ಈ ಅಧ್ಯಯನದ ಮೂಲಕ ಮಹಿಳಾ ಸಬಲೀಕರಣದಲ್ಲಿ ಸ್ವ-ಸಹಾಯ ಸಂಘಗಳು ಎಷ್ಟರ ಮಟ್ಟಿಗೆ ಯಶಸ್ಸನ್ನು ಹೊಂದಿವೆ ಮತ್ತು ಎಷ್ಟರ ಮಟ್ಟಿಗೆ ಯಶಸ್ಸನ್ನು ಹೊಂದಿಲ್ಲ? ಅದಕ್ಕೆ ಕಾರಣಗಳೇನು? ಸರ್ಕಾರದ ಯೋಜನೆಗಳು ಎಷ್ಟರ ಮಟ್ಟಿಗೆ ತನ್ನ ಯೋಜನೆಗಳ ಮೂಲಕ ಮಹಿಳೆಯರ ಸಬಲೀಕರಣಕ್ಕೆ ಕಾರಣವಾಗಿವೆ? ಇಲ್ಲವಾದರೆ ಅದಕ್ಕೆ ಕಾರಣಗಳೇನು? ಎನ್ನುವುದನ್ನು ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ಸಂಶೋಧಿಸುವುದು ಮತ್ತು ಸೂಕ್ತ ಪರಿಹಾರಗಳನ್ನು

ಕಂಡುಕೊಳ್ಳುವುದು. ಅದಕ್ಕಾಗಿ ಪ್ರತಿ ಗ್ರಾಮ ಪಂಚಾಯತಿಯಿಂದ ೩ ರಿಂದ ೪ ಗ್ರಾಮಗಳನ್ನು ಮತ್ತು ಗ್ರಾಮಗಳಲ್ಲಿನ ಸಂಘಗಳನ್ನು ಸಂಶೋಧನೆಗೆ ಅಳವಡಿಸಿಕೊಳ್ಳಲಾಗಿದೆ.

## ೧.೧೫ ಸಂದರ್ಶನಾ ಅಭ್ಯರ್ಥಿಗಳ ಆಯ್ಕೆ

ಸಂಶೋಧನಾ ಕ್ಷೇತ್ರಕ್ಕೆ ಆಯ್ಕೆ ಮಾಡಿಕೊಂಡಿರುವ ಅಥಣಿ ತಾಲ್ಲೂಕಿನ ಆರು ಗ್ರಾಮ ಪಂಚಾಯತಿಗಳಲ್ಲಿ ಬರುವ ಪ್ರತಿ ಗ್ರಾಮಗಳಲ್ಲಿ ಆಯ್ಕೆ ಮಾಡಿಕೊಂಡಿರುವ ೩ ರಿಂದ ೪ ಗ್ರಾಮಗಳಲ್ಲಿನ ೨ ರಿಂದ ೫ ಸಂಘಗಳಿಂದ ಒಟ್ಟು ೫೦ ಜನ ಮಹಿಳಾ ಸದಸ್ಯರನ್ನು ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಅದೇ ರೀತಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮಟ್ಟಗಳಲ್ಲಿನ ರಾಷ್ಟ್ರೀಕೃತ ಮತ್ತು ರಾಷ್ಟ್ರೀಕೃತವಲ್ಲದ ಬ್ಯಾಂಕುಗಳು ಮತ್ತು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳಿಂದಲೂ ಅಧಿಕಾರಿಗಳನ್ನು ಮತ್ತು ಮುಖ್ಯಸ್ಥರುಗಳನ್ನು ಇದರಲ್ಲಿ ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ೧.೧೬ ಮಹಿಳಾ ಸ್ವ-ಸಹಾಯ ಸಂಘಗಳ ಆಯ್ಕೆ

ಗ್ರಾಮ ಮತ್ತು ಸಂದರ್ಶನ ಅಭ್ಯರ್ಥಿಗಳನ್ನು ಸ್ವ-ಸಹಾಯ ಸಂಘಗಳ ಚಟುವಟಿಕೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅದಕ್ಕೆ ಅನುಸಾರವಾಗಿ ಹೆಚ್ಚು ಉಳಿತಾಯ, ಆದಾಯ, ಖರ್ಚು ಮತ್ತು ಸಾಲ ನಿರ್ವಹಣೆಯಲ್ಲಿ ಹೆಚ್ಚು ಯಶಸ್ವಿಯಾಗಿರುವ, ಸ್ವಯಂ ಉದ್ಯೋಗದಲ್ಲಿ ಯಶಸ್ವಿಯಾಗಿರುವ ಸಂಘಗಳನ್ನು ಮತ್ತು ಉಳಿತಾಯ ಮಾಡಿಕೊಂಡಿದ್ದರೂ, ಸಾಲ ಸೌಲಭ್ಯಗಳನ್ನು ಪಡಿದುಕೊಂಡು ಉದ್ಯೋಗ ನಿರತವಾಗಿಲ್ಲದ ಸಂಘಗಳನ್ನು, ಸಕಾಲಕ್ಕೆ ಉಳಿತಾಯ ಮಾಡದ ಮತ್ತು ಸಕಾಲಕ್ಕೆ ಸಭೆ ಸೇರದ ಸಂಘಗಳನ್ನು, ತಾಲ್ಲೂಕಿಗೆ ಹತ್ತಿರವಿರುವ ಗ್ರಾಮಗಳಲ್ಲಿನ ಸಂಘಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇದರಿಂದ ಮಹಿಳಾ ಸಬಲೀಕರಣಕ್ಕೆ ಕಾರಣವೇನು? ಸಬಲೀಕರಣವಾಗಿಲ್ಲದಿದ್ದರೆ ಕಾರಣಗಳೇನು? ಅದಕ್ಕೆ ಬ್ಯಾಂಕ್ ಸ್ವಯಂ ಸೇವಾ ಸಂಸ್ಥೆಗಳು ಮಾತ್ರ ಕಾರಣವೇ? ಅಥವಾ ಸ್ವ-ಸಹಾಯ ಸಂಘಗಳು ಕಾರಣವೇ? ಎನ್ನುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಈ ಆಧಾರದ ಮೇಲೆ ವಿವರವಾಗಿ ಅಧ್ಯಯನ ಮಾಡಲು, ೫ ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಸಂಶೋಧನೆ ಮಾಡಲಾಗಿದೆ. ಅದಕ್ಕಾಗಿ ಅಧ್ಯಯನಗಳನ್ನು ಈ ಕೆಳಕಂಡಂತೆ ವಿಂಗಡಿಸಿಕೊಳ್ಳಲಾಗಿದೆ.

## ೧.೧೭ ಅಧ್ಯಯನಗಳ ವಿಂಗಡಣೆ

### ಅಧ್ಯಾಯ ಒಂದು

ಈ ಅಧ್ಯಾಯದಲ್ಲಿ ಪೀಠಿಕೆ, ಸಂಶೋಧನೆಯ ಉದ್ದೇಶ, ಸಂಶೋಧನೆಗಾಗಿ ಅನುಸರಿಸಿರುವ ಸಂಶೋಧನಾ ವಿಧಾನ ಮತ್ತು ಮಾರ್ಗಗಳು, ಸಂಶೋಧನಾ ತಂತ್ರಗಳು, ಸಂಶೋಧನಾ ಕ್ಷೇತ್ರದ ಆಯ್ಕೆ ಗ್ರಾಮ ಪಂಚಾಯತಿಗಳ ಆಯ್ಕೆ, ಸ್ವ-ಸಹಾಯ ಸಂಘಗಳ ಆಯ್ಕೆ ಮತ್ತು ಸ್ವ-ಸಹಾಯ ಸಂಘಗಳ ಸದಸ್ಯರ ಆಯ್ಕೆ ಕುರಿತು ಚರ್ಚಿಸಲಾಗಿದೆ.

### ಅಧ್ಯಾಯ ಎರಡು

ಮಹಿಳಾ ಸಬಲೀಕರಣ ಮತ್ತು ಸ್ವ-ಸಹಾಯ ಸಂಘಗಳು, ಮಹಿಳಾ ಸಬಲೀಕರಣಕ್ಕೆ ಅಗತ್ಯ ಅಂಶಗಳನ್ನು, ಮಹಿಳಾ ಸಬಲೀಕರಣ ಎಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎನ್ನುವುದನ್ನು ತಿಳಿದು ಕೊಳ್ಳಲು ಸಾಹಿತ್ಯ ಸಮೀಕ್ಷೆಯನ್ನು ಈ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

### ಅಧ್ಯಾಯ ಮೂರು

ಈ ಅಧ್ಯಾಯದಲ್ಲಿ ಅಥಣಿಯ ಸಂಕ್ಷಿಪ್ತ ಇತಿಹಾಸವನ್ನು ಮತ್ತು ಸಂಶೋಧನಾತ್ಮಕ ಅಧ್ಯಯನಕ್ಕಾಗಿ ಸಂದರ್ಶಿಸಿರುವ ಸ್ವ-ಸಹಾಯ ಸಂಘಗಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

### ಅಧ್ಯಾಯ ನಾಲ್ಕು

ಈ ಅಧ್ಯಾಯದಲ್ಲಿ ಸ್ವ-ಸಹಾಯ ಸಂಘಗಳ ರಚನೆ, ಉಳಿತಾಯ, ಉದ್ಯೋಗ, ಆರ್ಥಿಕ ಚಟುವಟಿಕೆಗಳು ಮೊದಲಾದ ಅಂಶಗಳನ್ನು ಒಳಗೊಂಡಂತೆ ಒಟ್ಟಾರೆ, ಮಹಿಳಾ ಸಬಲೀಕರಣದಲ್ಲಿ ಮಹಿಳಾ ಸ್ವ-ಸಹಾಯ ಸಂಘಗಳು ವಹಿಸುತ್ತಿರುವ ಪಾತ್ರದ ಬಗ್ಗೆ ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

## ಅಧ್ಯಾಯ ಐದು

ಈ ಅಧ್ಯಾಯದಲ್ಲಿ ಸಾರಾಂಶ, ಸಂಶೋಧನೆಯಿಂದ ಕಂಡುಕೊಂಡ ಅಂಶಗಳು ಮತ್ತು ಪರಿಹಾರಗಳ ಬಗ್ಗೆ ಚರ್ಚಿಸಲಾಗಿದೆ.

ಉಪಸಂಹಾರ

ಅನುಬಂಧ

# ಅಧ್ಯಾಯ ಎರಡು

# ಸಾಹಿತ್ಯ ಸಮೀಕ್ಷೆ

## ೨.೧ ಪೀಠಿಕೆ

ಸಾಹಿತ್ಯ ಗ್ರಂಥಗಳು, ಲೇಖನಗಳು, ಸಂಶೋಧನಾ ಗ್ರಂಥಗಳು ಪ್ರಸ್ತುತ ಸಂಶೋಧನೆಗೆ ಪರಿಪೂರ್ಣ ಅಧ್ಯಯನಕ್ಕೆ ಸಹಾಯಕವಾಗಬಲ್ಲವು. ಪ್ರಸ್ತುತ ಸಂಶೋಧನಾ ವಿಷಯವಾದ ***"ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಮಹಿಳಾ ಸ್ವ-ಸಹಾಯ ಸಂಘಗಳು"*** ಸಂಬಂಧಿಸಿದಂತೆ ಸಾಹಿತ್ಯ ಪರಿಕರಗಳು ನಿರ್ದಿಷ್ಟವಾಗಿ ಒಂದೇ ಗ್ರಂಥ ಅಥವಾ ಲೇಖನಗಳಲ್ಲಿ ದೊರೆಯುವುದಿಲ್ಲ. ಅವು ವಿವಿಧ ಗ್ರಂಥಗಳಲ್ಲಿ, ಲೇಖನಗಳಲ್ಲಿ ಹರಡಿಕೊಂಡಿವೆ. ಸಂಶೋಧನೆಗೆ ಸಂಬಂಧಿಸಿದ ಇಂತಹ ಸಾಹಿತ್ಯ ಗ್ರಂಥಗಳನ್ನು ಐತಿಹಾಸಿಕ ಅಧ್ಯಯನ, ಸಾರ್ವತ್ರಿಕ ಅಧ್ಯಯನ, ಪ್ರಾದೇಶಿಕ ಅಧ್ಯಯನ, ಸೂಕ್ಷ್ಮ ಅಧ್ಯಯನ ಮತ್ತು ಸಂಶೋಧನಾತ್ಮಕ ಅಧ್ಯಯನವೆಂದು ವಿಂಗಡಿಸಬಹುದು.

ಮೊದಲನೇ ವರ್ಗದ ಅಧ್ಯಯನವು ಅನುಷಂಗಿಕವಾಗಿದ್ದು, ಮಹಿಳಾ ಸಬಲೀಕರಣದ ಬೆಳವಣಿಗೆ, ಮಹಿಳಾ ಸಬಲೀಕರಣ ನಡೆದು ಬಂದ ದಾರಿ, ಸಬಲೀಕರಣಕ್ಕೆ ಸರ್ಕಾರಗಳು ಮತ್ತು ಇತರೆ ಸಂಸ್ಥೆಗಳು ಕೈಗೊಂಡ ಪ್ರಯತ್ನಗಳು. ಅದರಿಂದ ಆಗಿರುವ ಪ್ರಯೋಜನಗಳೇನು? ಪ್ರಯೋಜನಗಳಾಗಿರದಿದ್ದರೆ ಅದಕ್ಕೆ ಕಾರಣಗಳೇನು? ಎನ್ನುವುದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಮಾಹಿತಿಯನ್ನು ಒದಗಿಸಿಕೊಡಬಲ್ಲವು.

ಎರಡನೆಯ ವರ್ಗದ ಅಧ್ಯಯನವು ಸಾರ್ವತ್ರಿಕ ಅಧ್ಯಯನವಾಗಿದ್ದು, ಒಂದೇ ಕ್ಷೇತ್ರಕ್ಕೆ, ಪ್ರದೇಶಕ್ಕೆ ಸೀಮಿತವಾಗಿರದೆ ಸಮಗ್ರ ವಿಷಯವನ್ನು ಒಳಗೊಂಡಿರುತ್ತದೆ. ಇಂತಹ ಅಧ್ಯಯನಗಳಿಂದ ಯಾವ ಪ್ರದೇಶದಲ್ಲಿ ಮತ್ತು ಯಾವ ಯಾವ ಕ್ಷೇತ್ರಗಳಲ್ಲಿ ಮಹಿಳೆಯರ ಸಬಲೀಕರಣ ಯಶಸ್ವಿಯಾಗಿದೆ, ಅದಕ್ಕೆ ಕಾರಣಗಳೇನು? ಎನ್ನುವುದನ್ನು ತಿಳಿದು ಕೊಳ್ಳಬಹುದು.

ಮೂರನೆಯ ವರ್ಗದ ಅಧ್ಯಯನವು ಒಂದು ಪ್ರದೇಶಕ್ಕೆ, ಒಂದು ವಿಷಯಕ್ಕೆ ಸೀಮಿತವಾಗಿರುವಂತಹದು. ಈ ಅಧ್ಯಯನಗಳು ಗುಂಪುಗಳಿಂದ, ವೈಯಕ್ತಿಕವಾಗಿ ಮಾಡಿದ ಅಧ್ಯಯನಗಳಾಗಿದ್ದು, ವ್ಯಕ್ತಿ ಗುಂಪುಗಳಿಂದ ಅಂಕಿ-ಅಂಶಗಳ ಮೇಲೆ ಮಾಹಿತಿ ಸಂಗ್ರಹಿಸಿದ್ದಾಗಿರುತ್ತವೆ. ಈ ಮೂರು ವರ್ಗದ ಅಧ್ಯಯನಗಳು ಪ್ರಸ್ತುತ ಸಂಶೋಧನೆಗೆ ಅಗತ್ಯ ಅಧ್ಯಯನಗಳಾಗಿವೆ. ಅಂತಹ ಕೆಲವು

ಸಂಶೋಧನಾತ್ಮಕ ಲೇಖನಗಳನ್ನು, ಸಂಶೋಧನೆಗಳನ್ನು ಮತ್ತು ಇತರೆ ಅಧ್ಯಯನಗಳನ್ನು ಇಲ್ಲಿ ಚರ್ಚಿಸಲಾಗಿದೆ.

## ೨.೨ ಸಾಹಿತ್ಯ ಸಮೀಕ್ಷೆ

ಮಾರ್ಚ ಮತ್ತು ಟಾಕ್ಯೂ (೧೯೮೨)[೧] ಮಹಿಳೆಯ ಸಬಲೀಕರಣಕ್ಕೆ ಪುರುಷ ಮತ್ತು ಮಹಿಳೆಯರ ನಡುವಿನ ಅಂತರವು ಅಡ್ಡಿಯಾಗಿದೆ. ಸಮಾಜದಲ್ಲಿನ ಸಾಮಾಜಿಕ ಮೌಲ್ಯಗಳು ಮತ್ತು ಕಟ್ಟುಪಾಡುಗಳೂ ಸಹ ಅದಕ್ಕೆ ಅಡ್ಡಿಯಾಗಿವೆ. ಆದರೆ ಸಾಮಾಜಿಕ ಅಭಿವೃದ್ಧಿ ಗುಂಪುಗಳು ಮಹಿಳಾ ಸಬಲೀಕರಣದಲ್ಲಿ ಉತ್ತಮ ಪಾತ್ರವಹಿಸುತ್ತಿವೆ ಎಂದಿದ್ದಾರೆ.

ಮೊಹಂತಿ (೧೯೯೧)[೨] ಮಹಿಳಾ ಸಬಲೀಕರಣ ಸರ್ವವ್ಯಾಪಕವಾಗಿದೆ. ಅದು ಕೇವಲ ಆರ್ಥಿಕ ವಿಷಯಕ್ಕೆ ಮಾತ್ರ ಸಂಬಂಧಿಸಿಲ್ಲ. ಬದಲಾಗಿ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಮೊದಲಾದ ವಿಷಯಕ್ಕೆ ಸಂಬಂಧಿಸಿದ್ದು, ಈ ಎಲ್ಲಾ ಕ್ಷೇತ್ರಗಳಲ್ಲಿ ಬದಲಾವಣೆಯಾದಾಗ ಮಾತ್ರ ಸಬಲೀಕರಣ ಸಾಧ್ಯ ಎಂದಿದ್ದಾರೆ.

ಹಾಪ್ಕೆ (೧೯೯೨)[೩] ಸಬಲೀಕರಣ ವೈಯಕ್ತಿಕವಾಗಿ ಮತ್ತು ಗುಂಪಾಗಿ ಭಿನ್ನವಾದುದು. ಆರ್ಥಿಕವಾಗಿ ಸಬಲೀಕರಣವಾಗಬೇಕಾದರೆ ಉತ್ಪಾದನೆ, ಜ್ಞಾನ ಮತ್ತು ತಿಳುವಳಿಕೆಗಳ ಮೇಲೆ ಹಿಡಿತವಿರಬೇಕು. ಸಮಾಜ ಮತ್ತು ವೈಯಕ್ತಿಕವಾಗಿ ಉತ್ತಮ ಬೆಳವಣಿಗೆಯಾಗಬೇಕಾದರೆ ಸ್ಥಳೀಯವಾಗಿ ದೊರೆಯುವ ಸಂಪನ್ಮೂಲಗಳನ್ನು ಸರಿಯಾಗಿ ಸದ್ಬಳಕೆ ಮಾಡಿಕೊಳ್ಳಬೇಕು ಎಂದಿದ್ದಾರೆ.

ಸಚ್ಚಿದಾನಂದ ಸತಪತಿ (೧೯೯೪)[೪] ಸಂವಿಧಾನಕ್ಕೆ ೭೩ನೇ ತಿದ್ದುಪಡಿ ತಂದು ಮೀಸಲಾತಿಯ ಅನ್ವಯ ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಮಹಿಳೆಯರ ರಾಜಕೀಯ ಭಾಗವಹಿಸುವಿಕೆಗೆ ಹೆಚ್ಚು ಒತ್ತು ನೀಡಿರುವುದರಿಂದ ಮಹಿಳಾ ಸಬಲೀಕರಣಕ್ಕೆ ಹೆಚ್ಚು ಬಲಬಂದಿದೆ. 73 ನೇ ತಿದ್ದುಪಡಿ ನಂತರ ರಾಜಕೀಯದಲ್ಲಿ ಮಹಿಳೆಯರ ಭಾಗವಹಿಸುವಿಕೆ ಉತ್ತಮವಾಗಿದೆ. ಅದ್ದರಿಂದ ರಾಜಕೀಯ ಮಾತ್ರವಲ್ಲದೆ ಸಾಮಾಜಿಕವಾಗಿಯೂ ಸಬಲೀಕರಣ ಹೊಂದುತ್ತಿದ್ದಾರೆ ಎಂದಿದ್ದಾರೆ.

ದೇವಕಿಜೈನ್ (೧೯೯೪)[೫] ತಮ್ಮ ವಿಶ್ಲೇಷಣೆಯಲ್ಲಿ ಸಂವಿಧಾನದ 73 ನೇ ತಿದ್ದುಪಡಿಯು ಮಹಿಳೆಯರಿಗೆ ಪ್ರಜಾಸತ್ತಾತ್ಮಕ ನ್ಯಾಯವನ್ನು ಮತ್ತು ಸಂಪನ್ಮೂಲದ ಬಳಕೆಗೆ ಅವಕಾಶ ಮಾಡಿಕೊಟ್ಟಿದೆ.

ಆದರೆ ರಾಷ್ಟ್ರದ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಮಹಿಳೆಯರಿರುವುದರಿಂದ ಅವರ ಭಾಗವಹಿಸುವಿಕೆಗೆ ಹೆಚ್ಚು ಒತ್ತು ನೀಡಬೇಕು. ಇದರಿಂದ ಮಹಿಳೆಯರ ಸಬಲೀಕರಣವಾಗುತ್ತದೆ. ಮಹಿಳೆಯರು ಸರಿಯಾಗಿ ರಾಜಕೀಯದಲ್ಲಿ ಭಾಗವಹಿಸದಿದ್ದರೆ, ರಾಷ್ಟ್ರದ ಅಭಿವೃದ್ಧಿ ಸಾಧ್ಯವಿಲ್ಲ ಎಂದಿದ್ದಾರೆ.

ಪಿಟ್ ಮತ್ತು ಖಂಡೇಕರ್ (೧೯೯೫)[೬] ನಿರ್ಧಾರ ತಗೆದುಕೊಳ್ಳುವಲ್ಲಿ ಪುರುಷನಷ್ಟೇ ಮಹಿಳೆಯು ಪಾಲುದಾರಳಾಗಿದ್ದಾಳೆ. ಆದರೆ ಸಂಪನ್ಮೂಲ ಮತ್ತು ಸಾಧನೆಯ ನಡುವೆ ಉತ್ತಮ ಸಂಬಂಧವಿರಬೇಕು. ಈ ಎರಡೂ ಅಂಶಗಳು ಇಲ್ಲದಿದ್ದರೆ, ಅಭಿವೃದ್ಧಿ ಹೊಂದಲು ಆಗುವುದಿಲ್ಲ. ಅದಕ್ಕಾಗಿ ಸಂಬಂಧ ಪಟ್ಟ ಸಂಸ್ಥೆಗಳು ಉತ್ತಮ ಸಾಧನೆಗೆ ಅಗತ್ಯ ಸಂಪನ್ಮೂಲಗಳನ್ನು ಒದಗಿಸಿಕೊಡಬೇಕು ಎಂದಿದ್ದಾರೆ.

ಮಾಯೂಕ್ಸ್ (೧೯೯೭)[೭] ಮಹಿಳೆಯ ಸಬಲೀಕರಣಕ್ಕೆ ನೀಡುವ ಸಣ್ಣ ಪ್ರಮಾಣದ ನೆರವು ಕೆಲವು ಸಂದರ್ಭದಲ್ಲಿ ಪುರುಷರೇ ಬಳಕೆ ಮಾಡಿಕೊಳ್ಳುತ್ತಾರೆ. ಮತ್ತೆ ಕೆಲವು ಸಂದರ್ಭದಲ್ಲಿ ಪುರುಷರ ಆದೇಶದ ಮೇರೆಗೆ ಸಾಲವನ್ನು ಪಡೆಯುತ್ತಾರೆ. ಇಂತಹ ಸಂದರ್ಭದಲ್ಲಿ ಸಾಲದ ಮರುಪಾವತಿ ಆಗದೇ ಇರಬಹುದು. ಇದರಿಂದ ಮಹಿಳೆಯರ ಆದಾಯ ಇಳಿಮುಖವಾಗುತ್ತದೆ. ಅದು ಸಬಲೀಕರಣಕ್ಕೆ ಅಡ್ಡಿಯಾಗುತ್ತದೆ ಎಂದಿದ್ದಾರೆ. ಇದು ವಾಸ್ತವಿಕತೆಗೆ ಹತ್ತಿರವಾದ ಅಭಿಪ್ರಾಯವಾಗಿದೆ. ಅದನ್ನು ಈ ಸಂಶೋಧನೆಯಲ್ಲಿ ಕಂಡುಕೊಳ್ಳಲಾಗಿದೆ.

ಮಾಯೂಕ್ಸ್. ಎಲ್ (೧೯೯೮)[೮] ಮಹಿಳೆಯರ ಸಬಲೀಕರಣ ಕೇವಲ ಯೋಜನೆಗಳಲ್ಲಿ, ಸರ್ಕಾರದ ಪ್ರಯತ್ನಗಳಲ್ಲಿ, ಉಳಿತಾಯದಲ್ಲಿ ಇರುವುದಿಲ್ಲ. ಬದಲಾಗಿ ಅದು ಆಂತರಿಕವಾಗಿರುತ್ತದೆ. ಆದ್ದರಿಂದ ಮೊದಲು ಆಂತರಿಕವಾಗಿ ಬದಲಾವಣೆಯಾಗಬೇಕು. ಅಂದರೆ ಸಮಾಜದಲ್ಲಿನ ನಿಯಂತ್ರಣಗಳು ಕಡಿಮೆಯಾಗಬೇಕು. ಪುರುಷರು ತಮ್ಮ ಅಧಿಕಾರವನ್ನು ಮಹಿಳೆಯರ ಜೊತೆಗೆ ಹಂಚಿಕೊಳ್ಳಬೇಕು. ಆಗ ಮಾತ್ರ ಸಬಲೀಕರಣಕ್ಕೆ ಮಾರ್ಗ ಸುಲಭವಾಗುತ್ತದೆ ಎಂದಿದ್ದಾರೆ. ಆದರೆ ವಾಸ್ತವಿಕವಾಗಿ ಸಂಘಗಳು ರಚನೆಯಾದ ನಂತರ ಮಹಿಳೆಯರ ಮಹತ್ವ ಮತ್ತು ಸರ್ಕಾರಗಳು ಮತ್ತು ಬ್ಯಾಂಕುಗಳು ಮಹಿಳೆಯರಿಗೆ ಹೆಚ್ಚು ಮಹತ್ವ ನೀಡಿರುವುದು ಪುರುಷರಿಗೆ ತಿಳಿಯುತ್ತಿರುವುದರಿಂದ ಮಹಿಳೆಯರಿಗೆ ಹೆಚ್ಚು ಮಹತ್ವ ನೀಡುತ್ತಿದ್ದಾರೆ. ಆದರೆ ಅದು ಕೇವಲ ಮಹಿಳೆಯರಿಂದ ನೆರವನ್ನು ಪಡೆದುಕೊಳ್ಳುವುಕ್ಕಾಗಿ ಎನ್ನುವುದನ್ನು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಗಿದೆ.

ಮಾಲತಿ ರಾಮನಾಥನ್ (೨೦೦೦)[೯] ಪಂಜಾಬ್ ಪ್ರದೇಶದಲ್ಲಿ ಕೈಗೊಂಡ ಸಮೀಕ್ಷೆಯಲ್ಲಿ ಮಹಿಳೆಯರು ೧೦ ರಿಂದ ೨೦ ಸದಸ್ಯರು ಸೇರಿ ಪಾಪಡ್ (ಹಪ್ಪಳ) ಮಾಡುತ್ತಾ ಗೃಹ ಉದ್ಯೋಗವನ್ನು

ಕೈಗೊಂಡಿದ್ದಾರೆ. ಇದು ಮಹಿಳೆಯರ **ಸಬಲೀಕರಣಕ್ಕೆ** ಉತ್ತಮ ಪ್ರಯತ್ನವಾಗಿದೆ. ಅಲ್ಲದೆ ಇದರಿಂದ ಸುಶಿಕ್ಷಿತರಾಗುತ್ತಿದ್ದಾರಲ್ಲದೆ, ಹಣಕಾಸಿನ ನಿರ್ವಹಣೆ ಮತ್ತು ವ್ಯವಹಾರಿಕವಾಗಿಯೂ ಸುಧಾರಣೆ ಹೊಂದುತ್ತಿದ್ದಾರೆ ಎಂದಿದ್ದಾರೆ. ಆದರೆ ಉದಾರೀಕರಣ, ಖಾಸಗೀಕರಣ ನೀತಿಯಿಂದ, ಆಧುನಿಕ ತಾಂತ್ರಿಕತೆಯಿಂದ ಯಾವುದೇ ಲಾಭವನ್ನು ಗಳಿಸುವುದಿರಲಿ ಅಂತಹ ಉದ್ಯೋಗವನ್ನು ಕೈಗೊಳ್ಳಲು ಸಂಘಗಳು ಹಿಂಜರಿಯುತ್ತಿವೆ ಎನ್ನುವುದನ್ನು ಲೇಖಕರು ಗಮನಿಸಬೇಕಿತ್ತು.

ಬಿದ್ಯುತ್ ಮೊಹಂತಿ (೨೦೦೦)[೧೦] ತಮ್ಮ ಲೇಖನದಲ್ಲಿ ರಾಜ್ಯಗಳು ಅಭಿವೃದ್ಧಿಯ ತಿಳುವಳಿಕೆಯ ಮೂಲಕ ಸ್ವಯಂ ಸಬಲೀಕರಣ ಮಾಡಲು ಪ್ರಯತ್ನಸುತ್ತಿವೆ. ಅದಕ್ಕಾಗಿ ಮೀಸಲಾತಿಯನ್ನು ಪಂಚಾಯತಿಗಳಲ್ಲಿ ನೀಡಲಾಗಿದೆ. ಆದರೆ ಮೀಸಲಾತಿಯಿಂದ ಚುನಾಯಿತರಾದ ಕೆಲವೇ ಕೆಲವರನ್ನು ಸುಧಾರಿಸುವುದಲ್ಲ. ಬದಲಾಗಿ ಎಲ್ಲರನ್ನೂ ಆರ್ಥಿಕವಾಗಿ ಸ್ವತಂತ್ರರನ್ನಾಗಿ ಮಾಡುವುದು ಮುಖ್ಯ ಎಂದಿದ್ದಾರೆ. ಆದರೆ ಲೇಖಕರು ಎಲ್ಲರನ್ನು ಆರ್ಥಿಕವಾಗಿ ಹೇಗೆ ಸ್ವತಂತ್ರರನ್ನಾಗಿ ಮಾಡಬೇಕು ಎನ್ನುವುದನ್ನು ತಿಳಿಸಬೇಕಿತ್ತು.

ಫ್ರಾನ್ಸಸ್, ಅಜಯ್ ಟಂಖ (೨೦೦೦)[೧೧] ಮೊದಲಾದವರು (ಇ.ಡಿ.ಎ ರೂರಲ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಅಪ್ಮಾಸ್) ಇ.ಡಿ.ಎ ರೂರಲ್ ಸಿಸ್ಟಮ್ಸ ಪ್ರೈವೇಟ್ ಲಿಮಿಟೆಡ್ ಅಪ್ಮಾಸ್ ಮತ್ತು ಆಂಧ್ರ ಪ್ರದೇಶ ಮಹಿಳಾ ಅಭಿವೃದ್ಧಿ ಸಂಸ್ಥೆ ವತಿಯಿಂದ ಸ್ವ-ಸಹಾಯ ಸಂಘಗಳು ಮತ್ತು ರಾಜಕೀಯ, ಸ್ವ-ಸಹಾಯ ಸಂಘಗಳು ಮತ್ತು ಸಾಮಾಜಿಕ ನ್ಯಾಯ, ಸ್ವ-ಸಹಾಯ ಸಂಘಗಳು ಮತ್ತು ಸಮಾನತೆ ಮೊದಲಾದ ವಿಷಯಗಳ ಮೇಲೆ ಕ್ಷೇತ್ರಾಧ್ಯಯನದ ಮೂಲಕ ಆಂಧ್ರ, ಕರ್ನಾಟಕ, ಒರಿಸ್ಸಾ ಮತ್ತು ರಾಜಸ್ಥಾನದ ಒಟ್ಟು ೧೦೮ ಗ್ರಾಮಗಳಿಂದ ೨೧೪ ಸ್ವ-ಸಹಾಯ ಸಂಘಗಳನ್ನು ಆಯ್ಕೆಮಾಡಿಕೊಂಡು ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನದಲ್ಲಿ ಸಂಘಗಳು ಉಳಿತಾಯ, ಹಣಕಾಸಿನ ನಿರ್ವಹಣೆಯಿಂದ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಬೆಳವಣಿಗೆ ಹೊಂದಲು ಸಹಾಯಕವಾಗಿವೆ ಎಂದಿದ್ದಾರೆ. ಆದರೆ ಅರ್ಧಕ್ಕಿಂತ ಹೆಚ್ಚು ಸಂಘಗಳು ಅನಕ್ಷರತೆಯಿಂದ ಕೂಡಿರುವುದರಿಂದ ಕೇವಲ ತಮ್ಮ ಜ್ಞಾನವನ್ನು ಸಂಘದ ಚಟುವಟಿಕೆಗಳಿಗೆ ಸೀಮಿತ ಗೊಳಿಸಿಕೊಂಡಿವೆ ಎನ್ನುವುದನ್ನ ಚಿಂತಕರು ಗಮನ ಹರಿಸಬೇಕಿತ್ತು. ಅಲ್ಲದೆ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಹೇಗೆ ಬೆಳವಣಿಗೆ ಹೊಂದಿವೆ ಎನ್ನುವುದನ್ನು ತಿಳಿಸಿಲ್ಲ.

ಕಬೀರ್ (೨೦೦೧)[೧೨] ಮಾಯೂಕ್ಸ್ ಹೇಳಿದಂತೆ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾ ವೈಯಕ್ತಿಕ ಸಬಲೀಕರಣ ಅಸ್ತಿತ್ವದಲ್ಲಿರುವ ಸಂಸ್ಥೆಗಳಲ್ಲಿ ಬದಲಾವಣೆ ತರಬಲ್ಲವು. ಆದರೂ ಸಾಮೂಹಿಕ

ಸಬಲೀಕರಣವಾದರೆ ವೈಯಕ್ತಿಕ ಸಬಲೀಕರಣ ಮತ್ತು ಆಯ್ಕೆ ಮಿತವಾಗುತ್ತದೆ ಎಂದಿದ್ದಾರೆ. ಆದರೆ ಯಾವ ಆಯ್ಕೆಯು ಹೇಗೆ ಮಿತವಾಗಿರಬೇಕು ಎನ್ನುವುದನ್ನು ಚಿಂತಕರು ಸರಿಯಾಗಿ ತಿಳಿಸಿರುವುದಿಲ್ಲ.

ಭಾರತಿ ಶರ್ಮಾ (೨೦೦೧)[೧೩] ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ಸ್ವ-ಸಹಾಯ ಸಂಘಗಳಿಂದ ಉಳಿತಾಯದ ಮೂಲಕ ಸಬಲೀಕರಣ ಹೊಂದುತ್ತಿದ್ದಾರೆ. ಸಂಘದಲ್ಲಿ ಲಾಭದಾಯಕ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಇದರಿಂದ ಆರ್ಥಿಕ ಸಬಲತೆ ಸಾಧ್ಯವಾಗಿದೆ. ಇಂತಹ ಸಬಲತೆಯಿಂದ ಇತರೆ ಕ್ಷೇತ್ರಗಳ ಮೇಲೆ ಮಹಿಳೆಯರ ಹಿಡಿತ ಹೆಚ್ಚುತ್ತಿದೆ ಎಂದಿದ್ದಾರೆ.

ಯೋಜನಾ ಆಯೋಗ (೨೦೦೨)[೧೪] ಹತ್ತನೇ ಹಣಕಾಸು ಆಯೋಗವು ಮಹಿಳೆಯರ ಆರೋಗ್ಯ, ಸಾಕ್ಷರತೆ, ಉದ್ಯೋಗ ಮೊದಲಾದ ಕ್ಷೇತ್ರಗಳ ಮೂಲಕ ಅಭಿವೃದ್ಧಿ ಹೊಂದಲು ಬೇಕಾದ ನೆರವನ್ನು ನೀಡಿದೆಯಲ್ಲದೆ, ರಾಜ್ಯ ಸರ್ಕಾರಗಳು ಮಹಿಳೆಯರ ಸಬಲೀಕರಣಕ್ಕೆ ಹೆಚ್ಚು ಒತ್ತು ನೀಡಬೇಕೆಂದು ತಿಳಿಸಿದೆ.

ರೇಖಾ. ಆರ್. ಗಾಂವಕರ್ (೨೦೦೩)[೧೫] ಮಹಿಳೆಯು ಪ್ರತಿಯೊಂದು ಆರ್ಥಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದಾಳೆ. ಎಲ್ಲಾ ಕ್ಷೇತ್ರದ ಅಭಿವೃದ್ಧಿ ಮತ್ತು ಆಶಾದಾಯಕ ಬೆಳವಣಿಗೆಯಾಗಬೇಕಾದರೆ ಮಹಿಳೆ ಮತ್ತು ಪುರುಷರ ನಡುವೆ ಸಮಾನತೆ ಏರ್ಪಡಬೇಕು. ಇದರಿಂದ ಮಹಿಳೆಯು ಆರ್ಥಿಕ ಅಭಿವೃದ್ಧಿಯಲ್ಲಿ ಹೆಚ್ಚಿನ ಪಾತ್ರವಹಿಸಬಹುದು. ಇದು ಮಹಿಳಾ ಸಬಲೀಕರಣ ಹೊಂದಲು ಸಾಧ್ಯತೆಗೆ ಕಾರಣವಾಗುತ್ತದೆ. ಅದಕ್ಕಾಗಿ ಸ್ವಯಂಸೇವಾ ಸಂಸ್ಥೆಗಳು ಪ್ರಯತ್ನಮಾಡಬೇಕು ಎಂದಿದ್ದಾರೆ. ಆದರೆ ಮಹಿಳೆ ಮತ್ತು ಪುರುಷರ ನಡುವೆ ಎಂತಹ ಸಮಾನತೆ ಏರ್ಪಡಬೇಕು ಎನ್ನುವುದನ್ನು ಚಿಂತಕರು ಸಮಗ್ರವಾಗಿ ತಿಳಿಸಬೇಕಿತ್ತು.

ಕೆ.ಬಿ.ರಾಯ್ ಮತ್ತು ಎಸ್. ನಿರಂಜನ್ (೨೦೦೪)[೧೬] ೨೬ ರಾಜ್ಯಗಳಿಂದ ೧೫ ರಿಂದ ೪೯ ವರ್ಷ ವಯಸ್ಸಿನ ೯೦,೦೦೦ ಮಹಿಳೆಯರನ್ನು ಆಯ್ಕೆಮಾಡಿಕೊಂಡು ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಮಹಿಳೆಯರ ಶಿಕ್ಷಣ ಮತ್ತು ಪುರುಷರೊಂದಿಗಿನ ಸಂಬಂಧ, ನಿರ್ಣಯ ತಗೆದುಕೊಳ್ಳುವಲ್ಲಿ ಮಹಿಳೆಯರ ಪಾತ್ರದ ಬಗ್ಗೆ ವಿವರಿಸುತ್ತಾ ಮಹಿಳೆಯರು ಸಾಕ್ಷರಸ್ಥರಾಗಿದ್ದಾರೆ. ಇದರಿಂದ ಸಬಲೀಕರಣರಾಗಲು ಸಾಧ್ಯವಾಗುತ್ತಿದೆ ಎಂದಿದ್ದಾರೆ. ಆದರೆ ಶಿಕ್ಷಣ ದೊರೆತ ಮಾತ್ರಕ್ಕೆ ಸಬಲೀಕರಣವಾಗಲು ಸಾಧ್ಯವಿಲ್ಲ. ಬದಲಾಗಿ ಉದ್ಯೋಗವೂ ಅಷ್ಟೇ ಮುಖ್ಯವಾಗಿರುತ್ತದೆ ಎನ್ನುವುದನ್ನ ಲೇಖಕರು ಗಮನಿಸಬೇಕಾಗಿತ್ತು. ಅಲ್ಲದೆ ಯಾವ ಆಧಾರದ ಮೇಲೆ ಮಹಿಳೆಯರು ಸಾಕ್ಷರಸ್ಥರಾಗಿದ್ದಾರೆ ಎನ್ನವುದುನ್ನು ಚಿಂತಕರು ತಿಳಿಸಬೇಕಿತ್ತು.

ರಾಘವ್ ಗೈಯ (೨೦೦೫)[೧೭] ಪೂನಾ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಿರುವ ಸಂಶೋಧನೆಯಾಗಿದೆ. ಇದರಲ್ಲಿ ಸ್ವ-ಸಹಾಯ ಸಂಘಗಳು ತಮ್ಮ ಉಳಿತಾಯದಿಂದ ಭರವಸೆ ಮೂಡಿಸಿರುವುದಲ್ಲದೆ. ಇತರೆ ಚಟುವಟಿಕೆಗಳಲ್ಲಿ ತೊಡಗಿವೆ. ಬ್ಯಾಂಕುಗಳು ಇದಕ್ಕೆ ಪೂರಕವಾಗಿ ನೆರವನ್ನು ನೀಡುತ್ತಾ ಬರುತ್ತಿವೆ. ಆ ನೆರವು ಇತ್ತೀಚೆಗೆ ಹೆಚ್ಚಾಗಿದೆ. ಇಂತಹ ನೆರವಿನಿಂದ ಮಹಿಳಾ ಸಬಲೀಕರಣಕ್ಕೆ ಹೆಚ್ಚು ಬಲ ಬಂದಿದೆ ಎಂದಿದ್ದಾರೆ. ಆದರೆ ಬ್ಯಾಂಕುಗಳಿಗೂ ಸಂಘಗಳನ್ನು ರಚಿಸಲು ಆದೇಶ ಬಂದ ನಂತರ ಮತ್ತು ಸಂಘದಲ್ಲಿನ ಸದಸ್ಯೆಯರಿಗೆ ತಮ್ಮ ಪುರುಷರು ಬ್ಯಾಂಕಿನಿಂದ ಸಾಲ ಪಡೆದಿದ್ದನ್ನು ತುಂಬದೇ ಇರುವ ನೆಪ ಮಾಡಿಕೊಂಡು ಸಾಲ ನೀಡುವಾಗ ತೊಂದರೆ ನೀಡುತ್ತಿರುವುದನ್ನು ಲೇಖಕರು ಗುರುತಿಸಬೇಕಾಗಿತ್ತು.

ಅಜ್ಜಿನ್ ಇಸ್ಲಾಂ ಮತ್ತು ಸುಲ್ತಾನ (೨೦೦೫)[೧೮] ಮಹಿಳೆಯರ ಸಬಲೀಕರಣಕ್ಕೆ ಧಾರ್ಮಿಕ ಮೌಲ್ಯಗಳು, ಸಂಕುಚಿತ ಭಾವನೆ, ಮೊದಲಾದ ಅಂಶಗಳು ಮಹಿಳೆಯರ ಅಭಿವೃದ್ಧಿಗೆ ತೊಡಕಾಗಿವೆ. ಆದರೂ ಜಾಗತಿಕವಾಗಿ ಸ್ವಯಂ ಸೇವಾ ಸಂಸ್ಥೆಗಳು ದುರ್ಬಲರ ಮಹಿಳೆಯರ ಮತ್ತು ಬಡವರ ಅಭಿವೃದ್ಧಿಗೆ ಶ್ರಮಿಸುತ್ತಿವೆ. ಇದರಿಂದ ದುರ್ಬಲ ಮಹಿಳೆಯರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಿದ್ದಾರೆ. ಇದಕ್ಕೆ ಹಲವಾರು ಸ್ವಯಂ ಸೇವಾ ಸಂಸ್ಥೆಗಳ ಶ್ರಮವಿದೆ. ಇಂತಹ ಸಂಸ್ಥೆಗಳೊಂದಿಗೆ ಸರ್ಕಾರ ಕೈಜೋಡಿಸಿದರೆ ಉತ್ತಮ ಅಭಿವೃದ್ಧಿ ಸಾಧಿಸಬಹುದು ಎಂದಿದ್ದಾರೆ.

ಡಾ.ಜಿ.ಟಿ.ರಾಮಣ್ಣ (೨೦೦೮)[೧೯] ಅಥಣಿ ಗ್ರಾಮ ಪಂಚಾಯತಿಯಲ್ಲಿ ಮಹಿಳೆಯರ ರಾಜಕೀಯ ಸ್ಥಿತಿಗತಿ ಕುರಿತ ಸಂಶೋಧನಾತ್ಮಕ ಲೇಖನದಲ್ಲಿ, ಗ್ರಾಮ ಪಂಚಾಯತಿಯಲ್ಲಿ ಮಹಿಳೆಯರ ರಾಜಕೀಯ ಬೆಳವಣಿಗೆಯನ್ನು ತಿಳಿಸುತ್ತಾ, ಮಹಿಳಾ ರಾಜಕೀಯ ಸಬಲೀಕರಣ ಇಚ್ಛಾಶಕ್ತಿಯ ಕೊರತೆ, ಸಾಮಾಜಿಕ ಕಟ್ಟು ಪಾಡು, ಅನಕ್ಷರತೆ, ಕೌಟುಂಬಿಕ ಜವಾಬ್ದಾರಿಗಳಿಂದ ಇನ್ನೂ ಪರಿಪೂರ್ಣವಾಗಿ ಸಾಧ್ಯವಾಗುತ್ತಿಲ್ಲ ಎಂದಿದ್ದಾರೆ.

ಡಾ.ಜಿ.ಟಿ.ರಾಮಣ್ಣ (೨೦೦೮)[೨೦] ಮಹಿಳಾ ಸಬಲೀಕರಣ- ಅಥಣಿ ತಾಲ್ಲೂಕು ಒಂದು ಅಧ್ಯಯನ ಲೇಖನವು ಮಹಿಳಾ ಸಬಲೀಕರಣದ ಕಲ್ಪನೆ ಮತ್ತು ಬೆಳೆದುಕೊಂಡು ಬಂದ ಬಗೆಯನ್ನು ವಿವರಿಸುತ್ತಾ ರಾಜಕೀಯದ ಮೂಲಕ ಮಹಿಳೆಯ ಸಬಲೀಕರಣದಿಂದ ಉದ್ಯೋಗ ಮತ್ತು ಶಿಕ್ಷಣವನ್ನು ಪಡೆದುಕೊಳ್ಳಬಹುದು. ಬದಲಾಗಿ ಅದಕ್ಕೆ ಪೂರಕವಾಗಿ ಸ್ವ-ಸಹಾಯ ಗುಂಪುಗಳನ್ನು ರಚಿಸಿ ತಾಂತ್ರಿಕವಾಗಿ, ಸಾಮಾಜಿಕಾಗಿ ಮತ್ತು ಆರ್ಥಿಕವಾಗಿ ಸದೃಢರನ್ನಾಗಿ ಮಾಡಬೇಕು ಎಂದಿದ್ದಾರೆ.

ಉಮಾ.ವಿ.ಪಾಖರೆ (೨೦೦೮)[೨೧] ತಮ್ಮ ಲೇಖನದಲ್ಲಿ ಮಹಿಳೆಯರು ಸಾಮಾಜಿಕ ವ್ಯವಸ್ಥೆಗೆ ಆದ್ಯತೆ ನೀಡಿದ್ದಾರೆ. ಕೌಟುಂಬಿಕ ವ್ಯವಸ್ಥೆಯು ಅದಕ್ಕೆ ಮೂಲ ಕಾರಣವಾಗಿದೆ. ಇದರಿಂದ ಸಬಲೀಕರಣ ಹೊಂದಲು ಸಾಧ್ಯವಾಗಿಲ್ಲ. ಮಹಿಳೆಯರು ಸಬಲರಾಗಬೇಕಾದರೆ ಆರ್ಥಿಕವಾಗಿ ಸಬಲರಾಗಬೇಕು. ಅದಕ್ಕಾಗಿ ರಚಿತವಾಗಿರುವ ಸಂಘಗಳ ಮೂಲಕ ಉದ್ಯೋಗವನ್ನು ಕೈಗೊಳ್ಳಬೇಕು. ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಒದಗಿಸಿಕೊಡುವುದರ ಮೂಲಕ ಸ್ವಯಂ ಉದ್ಯೋಗವನ್ನು ಕೈಗೊಳ್ಳುವಂತೆ ಮಾಡಬೇಕು ಎಂದಿದ್ದಾರೆ.

ಬಡತನದ ನಿರ್ಮೂಲನೆ ಮತ್ತು ಮಹಿಳಾ ಸಬಲೀಕರಣದಲ್ಲಿ ಸ್ವ-ಸಹಾಯ ಸಂಘಗಳು ಪ್ರಮುಖ ಪಾತ್ರವಹಿಸಬಲ್ಲವು. ಸಂಘಗಳು ರಚನೆಯಾದರೆ ಸಂಘಗಳು ಉದ್ಯೋಗದಲ್ಲಿ ತೊಡಗುವುದರಿಂದ ಕೌಟುಂಬಿಕ ಸಮಸ್ಯೆಗಳು ನಿವಾರಣೆಯಾಗುವವು. ಆ ಮೂಲಕ ಮಹಿಳೆಯು ಉದ್ಯೋಗದಲ್ಲಿ ತನ್ನನ್ನು ತೊಡಗಿಸಿಕೊಂಡು ಸಬಲೀಕರಣ ಹೊಂದಬಲ್ಲಳು. ಅದಕ್ಕಾಗಿ ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕು ಎಂದಿದ್ದಾರೆ.

## ೨.೩ ಉಪಸಂಹಾರ

ಮೇಲಿನ ಎಲ್ಲಾ ಸಾಹಿತ್ಯ ಸಮೀಕ್ಷೆಗಳನ್ನು ಅವಲೋಕಿಸಿದಾಗ ಮಹಿಳಾ ಸಬಲಿಕರಣಕ್ಕೆ ಸಂಬಂಧಿಸಿದಂತೆ ಸಮಗ್ರ ಮಾಹಿತಿ ದೊರಕುತ್ತಿಲ್ಲ. ಒಂದೊಂದು ಸಾಹಿತ್ಯ ಸಂಶೋಧನೆಗಳು ಮತ್ತು ಲೇಖನಗಳು ವಿಭಿನ್ನ ವಿಷಯಗಳ ಮೇಲೆ ವಿವರವನ್ನು ಒಳಗೊಂಡಿವೆ. ಇವುಗಳನ್ನು ಅವಲೋಕಿಸಿದಾಗ ಮಹಿಳೆಯರ ಸಬಲೀಕರಣದಲ್ಲಿ ಯಾವ ಸಾಮಾಜಿಕ ಅಂಶಗಳೂ ಅಡ್ಡಿಯಾಗಿಲ್ಲ. ಬದಲಾಗಿ ಮಹಿಳೆಯರನ್ನು ಸಬಲೀಕರಣಗೊಳಿಸಲು ಸ್ವ-ಸಹಾಯ ಸಂಸ್ಥೆಗಳು ಪ್ರಯತ್ನಿಸಬೇಕು. ಅವುಗಳಿಗೆ ಬ್ಯಾಂಕುಗಳು ಮತ್ತು ಸರ್ಕಾರಗಳು ಬೆಂಬಲವಾಗಿ ನಿಲ್ಲಬೇಕು. ಆದರೂ ಸಹ ಈ ಸಮೀಕ್ಷೆಯ ಆಧಾರದ ಮೇಲೆ ಪ್ರಸ್ತುತ ಸಂಶೋಧನೆಯನ್ನು ಪರಿಪೂರ್ಣವಾಗಿ ಮಾಡಲು ಸಹಕಾರಿಯಾಗಿವೆ.

## ೨.೪ ಟಿಪ್ಪಣಿ

೧ ಮಾರ್ಚ ಕತ್ಯಾರನ್.ಎಸ್, ಮತ್ತು ರಜ್ಜೆಲ್ಲಿ ಟ್ಯಾಕ್ಯು (೧೯೮೨): "ವುಮೆನ್ಸ್ ಇನ್ಪಾರಮಲ್ ಅಸೋಷಿಯೇಷನ್ಸ್ ಅಂಡ್ ದಿ ಆರ್ಗನೈಸೇಷನಲ್ ಕೃಪಾಸಿಟಿ ಫಾರ್ ಡೆವೆಲಪ್ಮೆಂಟ್; ಮೊನೊಗ್ರಾಫ್ ಸೀರೀಸ್", ಕಾರ್ನೆಲ್ ಯೂನಿವರ್ಸಿಟಿ.

೨ ಮೊಹಂತಿ,ಸಿ.ಟಿ., (೧೯೯೧): " ಅಂಡರ್ ವೆಷ್ಟರ್ನ ಐಸ್ಸ್: ಫೆಮಿನಿಸ್ಟ್ ಸ್ಕಾಲರ್‌ಶಿಫ್ ಅಂಡ್ ಕಲೋನಿಯಲ್ ಡಿಸ್ಕೋರ್ಸ್ಸ ಇನ್ ಥರ್ಡ ವರ್ಲ್ಡ ವುಮೆನ್ ಅಂಡ್ ದಿ ಪೊಲಿಟಿಕ್ಸ್ ಆಫ್ ಫೆಮಿನಿಸಂ, ಇಂಡಿಯಾನ ಯುನಿವರ್‌ಸಿಟಿ ಪ್ರೆಸ್: ಕೇಮ್ರಬ್ರಿಡ್ಜ್.

೩. ಹಾಪ್ಕೆ (೧೯೯೨): " ಆನ್ ಎಕ್ಸ್ಪಿರಿಮೆಂಟ್ ಇನ್ ಎಂಪವರ್ಮೆಂಟ್ ಇನ್ ವುಮೆನ್ ಇನ್ ಡಿಶಿಷನ್ ಮೇಕಿಂಗ್: ರಂಜನಾ ಕುಮಾರಿ (ಇಡಿ), ೧೯೯೪.

೪. ಸಚ್ಚಿದಾನಂದ ಸತಪಥಿ(೧೯೯೪): " ವುಮೆನ್ಸ್ ಎಂಪೊವರ್ಮೆಂಟ್ ಅಂಡ್ ಪಂಚಾಯತ್ ರಾಜ್", ಐಸೆಕ್, ಬೆಂಗಳೂರು.

೫. ದೇವಕಿ ಜೈನ್ (೧೯೯೪): " ಎಂಪವರ್ಮೆಂಟ್ ಆಫ್ ವುಮೆನ್: ದ ಇಂಡಿಯನ್ ಕಂಟೆಸ್ಟ್", ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಅಡ್ಮಿನಿಸ್ಟೇಷನ್. ವ್ಯಾಲ್ಯುಂ.೫೫.

೬. ಪೀಟರ್ ಮತ್ತು ಖಂಡೇಕರ್ (೧೯೯೫): "ಎಕನಾಮಿಕ್ಸ್ ಅಂಡ್ ಸೋಷಿಯಲ್ ಎಂಪವರ್ಮೆಂಟ್ ಆಫ್ ರೂರಲ್ ಪೂರ್ ಥ್ರೋ ಎಸ್.ಹೆಚ್.ಜೀಸ್", ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕಾನಮಿಕ್ಸ್, ವ್ಯಾಲು ೦.೫೬. ನಂ.೩.

೭. ಮಯೂಕ್ಸ್.ಎಲ್. (೧೯೯೮): " ದ ಮ್ಯಾಜಿಕ್ ಇಂಗ್ರಿಡಿಯೆಂಟ್? ಮೈಕ್ರೋಫೈನಾನ್ಸ್ ಅಂಡ್ ವುಮೆನ್ಸ್ ಎಂಪವರ್ಮೆಂಟ್, ಎ ಬ್ರಿಫಿಂಗ್ ಪೇಪರ್ ಪ್ರಿಪೇಡ್ ಫಾರ್ ದ ಮೈಕ್ರೋ ಕ್ರೆಡಿಟ್ ಸಮ್ಮಿತ್, ವಾಷಿಂಗ್ಟನ್.

೮. ಮಾಯ್ಯೂಕ್ಸ್. ಎಲ್ (೨೦೦೧): " ಸೋಷಿಯಲ್ ಕ್ಯಾಪಿಟಲ್, ವುಮೆನ್ಸ್ ಎಂಪವರ್ಮೆಂಟ್ ಅಂಡ್ ಮೈಕ್ರೋಪೈನಾನ್ಸ್ ಇನ್ ಕ್ಯಮೆರೂನ್ ಡೆವೆಲಪ್ಮೆಂಟ್ ಅಂಡ್ ಚೇಂಜ್, ವ್ಯಾಲುಂ. ೩೨.

೯. ಮಾಲತಿ ರಾಮನಾಥನ್. (೨೦೦೦): " ಗ್ರಾಸ್ರೂಟ್ ಡೆವೆಲಪ್ಮೆಂಟ್ ಇನ್ ವುಮೆನ್ಸ್ ಎಂಪವರ್ಮೆಂಟ್ ಇನ್ ಇಂಡಿಯಾ", ಯೂನಿವರ್ಸಿಟಿ ಆಫ್ ಮುಂಬೈ

೧೦. ಬಿದ್ಯುತ್ ಮೊಹಂತಿ (೨೦೦೦): " ದ ೭೩ರ್ಡ್ ಕಾನಸ್ಟಿಟ್ಯೂಷನಲ್ ಅಮೆಂಡ್ಮೆಂಟ್ ಅಂಡ್ ಇಟ್ಸ್ ಇಂಪ್ಲಿಕೇಷನ್ ಫಾರ್ ವುಮೆನ್, ಕುರುಕ್ಷೇತ್ರ, ವ್ಯಾಲುಂ, ೧೫.೩

೧೧. ಫ್ರಾನ್ಸಿಸ್ ಠಂಕಾ (೨೦೦೦): " ನ್ಯಾಚುರಲ್ ಅಂಡ್ ಕ್ವಾಸಿ-ಎಕ್ಸ್ಪಿರಿಮೆಂಟ್ಸ್ ಇನ್ ಎಕನಾಮಿಕ್ಸ್", ಜರ್ನಲ್ ಆಫ್ ಬ್ಯುಸಿನೆಸ್ಸ್ ಅಂಡ್ ಎಕನಾಮಿಕ್ಸ್ ಸ್ಟ್ಯಟಿಸ್ಟಿಕ್ಸ್. ವ್ಯಾಲುಂ.೧೩(೨), ೧೫೧-೧೬೧.

೧೨. ಕಬೇರ್ (೨೦೦೧): " ಟಾಕಿಂಗ್ ದ ಡೌನ್ ಸೈಡ್ : ಸೋಷಿಯಲ್ ಕ್ಯಾಪಿಟಲ್, ವುಮೆನ್ಸ್ ಎಂಪವರ್ಮೆಂಟ್ ಅಂಡ್ ಮೈಕ್ರೋಪೈನಾನ್ಸ್ ಇನ್ ಕ್ಯಮೆರೂನ್ ಡೆವೆಲಪ್ಮೆಂಟ್ ಅಂಡ್ ಚೇಂಜ್, ವ್ಯಾಲುಂ. ೩೨.

೧೩. ಭಾರತಿ ಶರ್ಮಾ, (೨೦೦೧): " ಷೆಲ್ಪ್ ಹೆಲ್ಪ್ ಗ್ರೂಫ್ ಅಂಡ್ ವುಮೆನ್ ಎಂಪವರ್ಮೆಂಟ್- ಎ ಕೇಸ್ ಸ್ಟಡಿ ಆಫ್ ಸ್ವಾ-ಷಕ್ತಿ ಪ್ರಾಜೆಕ್ಟ್", ಜಾಮಿಯಾ ಮಿಲ್ಲಿಯಾ ಇಸ್ಲಾಮಿಯಾ, ನ್ಯೂ ದೆಲ್ಲಿ

೧೪. ಟೆಂತ್ ಫೈವ್ಯಿಯರ್ ಪ್ಲ್ಯಾನ್ ಡಾಕ್ಯುಮೆಂಟ್ (೨೦೦೨-೨೦೦೭) ಪ್ಲ್ಯಾನಿಂಗ್ ಕಮಿಷನ್, ಗವರ್ನಮೆಂಟ್ ಆಫ್ ಇಂಡಿಯಾ

೧೫. ರೇಖಾ. ಆರ್. ಗಾಂವಕರ (೨೦೦೩): " ರೋಲ್ ಆಫ್ ಸೆಲ್ಫ್ ಹೆಲ್ಪ್ ಗ್ರೂಪ್ಸ್ ಇನ್ ಎಂಪವರ್ಮೆಂಟ್ ಆಫ್ ವುಮೆನ್, ಮ್ಯಾಕ್ಮಿಲನ್ನ್ ಪ್ರೆಸ್ಸ್, ನ್ಯೂ ಡೆಲ್ಲಿ.

೧೬. ಕೆ.ಟಿ.ರಾಯ್ ಅಂಡ್ ನಿರಂಜನ್ನ್ (೨೦೦೪): " ಎಂಪವರ್ಮೆಂಟ್ ಆಫ್ ವುಮೆನ್ ಅಂಡ್ ಸೆಲ್ಫ್ ಹೆಲ್ಪ್ ಗ್ರೂಪ್ಸ್", ಜರ್ನಲ್ ಆಫ್ ಎಕನಾಮಿಕ್ಸ್ ಅಂಡ್ ಪೊಲಿಟಿಕಲ್ ವೀಕ್ಲಿ,ವ್ಯಾಲುಂ.೨೪, ೭೬-೮೧

೧೭. ರಾಘವ್ ಗೈಯ (೨೦೦೫): " ಮೈಕ್ರೋಫೈನಾನ್ಸ್, ಸೆಲ್ಫ್ ಹೆಲ್ಪ್ ಗ್ರೂಪ್ಸ್ ಅಂಡ್ ಎಂಪವರ್ಮೆಂಟ್ ಇನ್ ಮಹಾರಾಷ್ಟ್ರ, ಜೀಸ್ಸ್ ಅಂಡ್ ಮಾರಿ ಕಾಲೇಜ್, ಯೂನಿವರ್ಸಿಟಿ ಆಫ್ ಡೆಲ್ಲಿ

೧೮. ಆಜ್ನಿನ್ ಇಸ್ಲಾಂ ಮತ್ತು ಸುಲ್ತಾನ (೨೦೦೫): "ರೋಲ್ ಆಫ್ ಎನ್.ಜಿ.ಓಸ್ ಇನ್ ಎಂಪವರ್ಮೆಂಟ್ ದ ವಲ್ನೆರಬಲ್ಸ್ ವುಮೆನ್: ಎ ಸ್ಟಡೀ ಆನ್ ಅಸೋಷಿಯೇಷನ್

ಆಫ್ ಕಮ್ಯುನಿಟಿ ಡೆವೆಲಪ್ಮೆಂಟ್", ಏಷಿಯನ್ ಅಫೈರ್ಸ್; ವ್ಯಾಲುಂ-೨೭, ನಂ.೨೪:೪೦. ಅಕ್ಟೊಬರ್-ಡಿಸೆಂಬರ್.

೧೯. ಡಾ.ಜಿ.ಟಿ.ರಾಮಣ್ಣ (೨೦೦೭): " ವುಮೆನ್ ಎಂಪವರ್ಮೆಂಟ್ ಅ ಕೇಸ್ಟಡಿ ಆಫ್ ಅಥಣಿ ತಾಲ್ಲೂಕ ಆಫ್ ಬೆಳಗಾವಿ ಜಿಲ್ಲೆ", ಪ್ರೆಸೆಂಟೆಡ್ ದ ಪೇಪರ್ ಇನ್ ಟೆಂತ್ ನ್ಯಾಷನಲ್ ಕಾನ್ಫೆರೆನ್ಸ್, ಆರ್ಗನೈಜ್ಡ್ ಬೈ ಪೊಲಿಟಿಕಲ್ ಸೈನ್ಸ್ ಅಸೋಷಿಯೇಷನ್ ಇನ್ ಕೂಡಲ ಸಂಗಮ.

೨೦. ಡಾ.ಜಿ.ಟಿ.ರಾಮಣ್ಣ (೨೦೦೭): "ಪೊಲಿಟಿಕಲ್ಲ್ ಸ್ಟೇಟಸ್ಸ್ ಆಫ್ ಅಥಣಿ ತಾಲ್ಲೂಕ ಆಫ್ ಬೆಳಗಾವಿ ಜಿಲ್ಲೆ", ಪ್ರೆಸೆಂಟೆಡ್ ದ ಪೇಪರ್ ಇನ್ ಸ್ಟೇಟ್‌ಲೆವೆಲ್ ಕಾಫರೆನ್ಸ್, ಆರ್ಗನೈಜ್ಡ್ ಬೈ ಹಂಪೆ ಯೂನಿವರ್ಸಿಟಿ

೨೧. ಉಮಾ.ವಿ. ಪಾಖರೆ (೨೦೦೭): " ಎಕನಾಮಿಕ್ಸ್ ಸ್ಟೇಟ್ಸ್ ಆಫ್ ವಾಲ್ಮಿಕಿ ವುಮೆನ್ಸ್ ಫ್ ಅಥಣಿ ತಾಲ್ಲೂಕ ಆಫ್ ಬೆಳಗಾವಿ ಜಿಲ್ಲೆ", ಪ್ರೆಸೆಂಟೆಡ್ ದ ಪೇಪರ್ ಇನ್ ಸ್ಟೇಟ್‌ಲೆವೆಲ್ ಕಾಫರೆನ್ಸ್, ಆರ್ಗನೈಜ್ಡ್ ಬೈ ಹಂಪೆ ಯೂನಿವರ್ಸಿಟಿ

# ಅಧ್ಯಾಯ ಮೂರು

# ಅಥಣಿ ತಾಲ್ಲೂಕಿನ ಪಕ್ಷಿನೋಟ ಮತ್ತು ಸಂದರ್ಶಿತರ ವಿವರ

## ೩.೧ ತಾಲ್ಲೂಕಿನ ಇತಿಹಾಸ

ಕರ್ನಾಟಕದ ೨೯ ಜಿಲ್ಲೆಗಳಲ್ಲಿ ಒಂದಾಗಿರುವ ಬೆಳಗಾವಿ ಜಿಲ್ಲೆಯು ೧೦ ತಾಲ್ಲೂಕುಗಳನ್ನು ಒಳಗೊಂಡಿದೆ. ಈ ತಾಲ್ಲೂಕುಗಳಲ್ಲಿ ಅಥಣಿ ತಾಲ್ಲೂಕು ಎರಡು ವಿಧಾನ ಸಭಾ ಮತ ಕ್ಷೇತ್ರಗಳನ್ನು ಹೊಂದಿದೆ. ಅಥಣಿ ಪ್ರಾಚೀನ ಕಾಲದಿಂದಲೂ ತನ್ನದೆಯಾದ ಮಹತ್ವವನ್ನು ಪಡೆದಿದೆ. ಮಹಾಭಾರತದ ಕೊನೆಯ ಅರಸ ಜನಮೇಜಯ ತನ್ನ ಸರ್ಪಯಾಗ ಕೈಗೊಂಡು ಅಥಣಿಯಲ್ಲಿನ ಸಪ್ತಸಾಗರದಲ್ಲಿ ವಾಸಿಸುತಿದ್ದ "ಬಕಾಲಲಬ್ದ" ಋಷಿಗಳ ಆಶೀರ್ವಾದ ಪಡೆದು ತನ್ನ ಯಾಗವನ್ನು ಪೂರ್ಣಗೊಳಿಸಿದನು ಎನ್ನುವ ಪ್ರತೀತಿ ಇದೆ. ಐನಾಪೂರ, ಸಿಂದಗಿಯ ಗ್ರಾಮಗಳು ಹಳೆಯ ಶಿಲಾಯುಗ ಹೊಂದಿವೆ. ಐನಾಪೂರ, ಗ್ರಾಮಗಳಲ್ಲಿ ಸುಮಾರು ಒಂದು ಲಕ್ಷ ಆಯುಧ ಉಪಕರಣಗಳು, ಮಡಿಕೆಗಳು ದೊರೆತಿವೆ. ಅದೇ ರೀತಿ ಶೇಗುಣಸಿ, ಸತ್ತಿ, ಐನಾಪೂರ ಗ್ರಾಮಗಳಲ್ಲಿ ಮಧ್ಯೆ ಹಳೆಯ ಶಿಲಾಯುಗದ ಉಪಕರಣಗಳು ಪತ್ತೆಯಾಗಿವೆ. ೨೫೦೦ ರಿಂದ ೧೦೦೦ ವರ್ಷದ ಪೂರ್ವ ಅವಧಿಯಲ್ಲಿನ ಸೂಕ್ಷ್ಮ ಮಧ್ಯ ಶಿಲಾಯುಗದ ವಿವಿಧ ವಸ್ತುಗಳು ಶೇಗುಣಸಿ, ಸಪ್ತಸಾಗರ, ಮಂಗಸೂಳಿ, ಸತ್ತಿ, ಕೊಡಗಾನೂರ, ಗ್ರಾಮಗಳಲ್ಲಿ ಕಂಡುಬಂದಿವೆ. ಕ್ರಿ.ಪೂ ೨೩೦೦ ರಿಂದ ೧೦೦೦ ವರ್ಷದ ಅವಧಿಯಲ್ಲಿನ ಶಿಲಾ ತಾಮ್ರಯುಗ ಸಂಸ್ಕೃತಿಯಲ್ಲಿ ಬಳಸುತ್ತಿದ್ದ ವಿವಿಧ ಉಪಕರಣಗಳು ನೇಸೂರ, ಸತ್ತಿ, ಶೇಗುಣಸಿ, ಸಪ್ತಸಾಗರ, ಗುಂಡೇವಾಡಿ, ಗ್ರಾಮಗಳಲ್ಲಿ ದೊರೆತಿವೆ. ಕ್ರಿ.ಪೂ ೧೨೦೦ ರಿಂದ ೧೦೦೦ ಅವಧಿಯಲ್ಲಿನ ಬೃಹತ್ ಶಿಲಾಯುಗದ ಕುರುಹುಗಳನ್ನು ಹುಲಗಬಾಳ, ಕಾಗವಾಡ, ಬನ್ನೂರ, ತೆಲಸಂಗ, ಕೊಟ್ಟಲಗಿ ಗ್ರಾಮಗಳಲ್ಲಿ ಗುರುತಿಸಲಾಗಿದೆ. ಅವುಗಳಲ್ಲಿ ಸಂಬರಗಿಯ ಗೋಧಿ ದಿಬ್ಬ ಪ್ರಾಚ್ಯ ಅವಶೇಷಗಳು ಮಹತ್ವವೆನಿಸಿವೆ. ಹಿಂದಿನ ಅಥಣಿಯ ಪರಿಸರವು ಅಶೋಕ ಚಕ್ರವರ್ತಿಯ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದು ಆತನ ಶಾಸನಗಳಿಂದ ತಿಳಿದುಬಂದಿದೆ. ಮೌರ್ಯ ಮನೆತನದ ಚಂದ್ರಗುಪ್ತ ಮೌರ್ಯ ಜೈನ ಧರ್ಮದ ಅಂತಿಮ ಸೃತಕೇವಲಿ ಭದ್ರಬಾಹು ಭಟ್ಟಾರಕನೊಂದಿಗೆ ಐನಾಪೂರಕ್ಕೆ ಬಂದಿದ್ದನೆಂಬುದು ಶ್ರವಣಬೆಳಗೂಳ ಶಾಸನಗಳು ಭ್ರಾಜಿಷ್ಣುವಿನ, 'ವಡ್ಡಾರಾಧನೆ', ಹರಿಸೇಣನ, 'ಬೃಹತ್ ಕಥಾ ಕೋಶ', ರಾಜ ನಂದಿಯ, 'ಭದ್ರಬಾಹು', ಕೃತಿಗಳಲ್ಲಿ ಉಲ್ಲೇಖಿತಗೊಂಡಿದೆ. ಮಗಧ ರಾಜ್ಯದ ನಂದ ಮನೆತನದ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಸಿಂಗರಾಜನ 'ಸಿಂಗರಾಜ ಪುರಾಣದಲ್ಲಿ' ಉಲ್ಲೇಖಿತವಾಗಿದೆ.

ಒಂದನೇ ಶತಮಾನದಲ್ಲಿ ಅಥಣಿಯ ಪಲಸಿಗೆ ಪನ್ನಿರ್ಚ್ಛಾಸಿರ, ಕರಹಾಡ ನಾಲ್ಕು ಸಾವಿರ, ಮಿಕಿಂಜೆ ಮೂರು ಸಾವಿರ, ಕನ್ನಂಬಾಡೆ ಮುನ್ನೂರು, ಕುಂತಳದೇಶ ಸೇವಿಣದೇಶ ಮೂವತ್ತಾರು ಮೊದಲಾದ ಪ್ರಾಂತ್ಯಗಳಲ್ಲಿ ಅಂತರ್ಗತವಾಗಿತ್ತು.[೧]

ಅಥಣಿಯು ಶಾತವಾಹನರ ಆಡಳಿತಕ್ಕೆ ಒಳಪಟ್ಟಿತ್ತು ಎನ್ನುವದರ ಬಗ್ಗೆ ಸಾಕ್ಷಿಯಾಗಿ ಸಂಬರಗಿಯಲ್ಲಿ ಪ್ರಾಚ್ಯಾವಶೇಷಗಳು ಸಾಕ್ಷಿಯಾಗಿದೆ.. ಕ್ರಿ.ಶ ೩೧೦ ರ ಕದಂಬರ ತಾಮ್ರಪಟ ಶಾಸನವು ಮಂಗಸೂಳಿಯಲ್ಲಿ ಬೆಳಕಿಗೆ ಬಂದಿದ್ದು, ಬನವಾಸಿ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವದಕ್ಕೆ ಸಾಕ್ಷಿಯಾಗಿದೆ. ಅದೇ ರೀತಿ ಬದಾಮಿ ಚಾಲುಕ್ಯರ, ಮಾಳಖೇಡದ ರಾಷ್ಟ್ರಕೂಟರ ಆಡಳಿತಕ್ಕೆ ಒಳಪಟ್ಟಿತ್ತು. ಎನ್ನುವದಕ್ಕೆ ಕೊಟ್ಟಲಗಿಯ ಕ್ರಿ ಶ ೧೦೨೨ ರ ಶಾಸನ, ಕೊಕಟನೂರಿನ ಕ್ರಿ.ಶ ೧೦೫೦-೫೧ ಶಾಸನ, ರಾಮತೀರ್ಥದ ೧೧೧೫ ಶಾಸನ, ತೆಲಸಂಗದ ಕ್ರಿ.ಶ ೧೧೨೨ ಶಾಸನ , ಕ್ರಿ ಶ ೧೧೨೬ ಬಳ್ಳಿಗೇರಿ ಶಾಸನಗಳು, ಸಾಕ್ಷಿಯಾಗಿವೆ.[೨]

ಕಲ್ಯಾಣದ ಚಾಲುಕ್ಯ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಈ ಪರಿಸರದಲ್ಲಿ ವಿಶಿಷ್ಟ ಶೈಲಿ ಮತ್ತು ವಿನ್ಯಾಸದ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳಲ್ಲಿ ಅಥಣಿಯ ಅಮೃತಲಿಂಗೇಶ್ವರ, ಬಾಡಗಿಯ ತ್ರಿಕೂಟಾಚಲ (ಕಲ್ಮೇಶ್ವರ), ಬಳ್ಳಿಗೇರಿಯ ತ್ರಿಕೂಟಾಚಲ (ನರಸಿಂಹ, ಬಸವಣ್ಣ), ತ್ರಿಕೂಟಾಚಲಕ ಜಿನಾಲಯ (ವೀರಭದ್ರ), ರಾಮಲಿಂಗೇಶ್ವರ, ಐನಾಪೂರದ ಆದಿನಾಥ, ಪಾರ್ಶ್ವನಾಥ, ಜಂಬುಲಿಂಗೇಶ್ವರ, ವಿಶ್ವನಾಥ ರಾಮಲಿಂಗೇಶ್ವರ , ಸತ್ತಿಯ ಕಲ್ಮೇಶ್ವರ ಮಲ್ಲಿಕಾರ್ಜುನ ತ್ರಿಕೂಟಾಚಲ (ಲಕ್ಷ್ಮಿ ನರಸಿಂಹ), ಸವದಿಯ ತ್ರಿಕೂಟಾಚಲ (ಗೋಪಾಲಕೃಷ್ಣ), ಆದಿನಾಥ ನಂದಗಾಂವ ತ್ರಿಕೂಟಾಚಲ (ರಾಮೇಶ್ವರ), ಕೋಹಳ್ಳಿಯ ಸಂಗಮೇಶ್ವರ, ಕೊಟ್ಟಲಗಿಯ ಸಿದ್ಧೇಶ್ವರ, ಕಲಾಲಿಂಗೇಶ್ವರ , ಶೇಡಬಾಳದ ಬಸವಣ್ಣ, ಮಲ್ಲಿಕಾರ್ಜುನ ತೆಲಸಂಗದ ಕಲ್ಮೇಶ್ವರ ದೇವಾಲಯಗಳು ಉತ್ತಮ ನಿದರ್ಶನಗಳಾಗಿವೆ. ಜೊತೆಗೆ ಸಮಕಾಲೀನ ಶೈವ, ವೈಷ್ಣವ, ಜೈನ, ಶಾಕ್ತ, ಸೌರ ಮೊದಲಾದ ಪಂಥಗಳ ವೈಶಿಷ್ಟವಾದ ಶಿಲ್ಪಗಳೂ ಈ ಪರಿಸರದಲ್ಲಿ ಗೋಚರಿಸುತ್ತವೆ.

---

೧.ಸೂರ್ಯನಾಥ.ಯು.ಕಾಮಥ್. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೧ ,ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೪, ಪು.೧೭೨

೨.ಡಾ॥.ವ್ಹಿ.ಎಸ್.ಮಾಳಿ. ಅಥಣಿ ತಾಲ್ಲೂಕು ಸಮಗ್ರ ದರ್ಶನ, ವಿಮೋಚನ ಪ್ರಕಾಶನ, ಅಥಣಿ, ೨೦೦೭, ಪು.೧೭

ಕಲ್ಯಾಣದ ಚಾಲುಕ್ಯ ಮನೆತನದ ಅಧೀನದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ಕಲ್ಯಾಣದ ಕಲಚೂರಿ ಮನೆತನವು ಕ್ರಿ.ಶ ೧೧೬೨ ರಿಂದ ೧೧೮೪ ರವರೆಗೂ ಆಳ್ವಿಕೆ ನಡೆಸಿದೆ. ಅಥಣಿ ಪರಿಸರವೂ ಈ ಮನೆತನದ ಆಳ್ವಿಕೆಯ ಪ್ರಭಾವದಲ್ಲಿತ್ತು ಎಂಬುದಕ್ಕೆ ಕೊಕಟನೂರಿನ ಕ್ರಿ.ಶ ೧೦೫೦-೫೧ ರ ಸುಮಾರು ೧೨ ನೇ ಶತಮಾನದ, ರಾಮತೀರ್ಥದ, ಕ್ರಿ.ಶ ೧೧೬೭ ರ ಬಳ್ಳಿಗೇರಿಯ , ತೆಲಸಂಗದ ಕ್ರಿ ಶ ಸುಮಾರು ೧೨ ನೇ ಶತಮಾನದ ಶಾಸನಗಳು ಪ್ರಮುಖ ಆಕರಗಳಾಗಿವೆ. ಈ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಈ ಪರಿಸರದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳಲ್ಲಿ ಮದಭಾವಿಯ ರಾಮಲಿಂಗೇಶ್ವರ ಮತ್ತು ಮಹಾದೇವ (ದ್ವಿಕೂಟ) ದೇವಾಲಯಗಳು ಮಹತ್ವದ್ದಾಗಿವೆ.

ಮಾಳಖೇಡದ ರಾಷ್ಟ್ರಕೂಟ ಮತ್ತು ಕಲ್ಯಾಣದ ಚಾಲುಕ್ಯ ಮನೆತನಗಳ ಅಧೀನದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ದೇವಗಿರಿಯ ಸೇವುಣ ಮನೆತನವು ಕ್ರಮೇಣ ಸ್ವತಂತ್ರವಾಗಿ ಕ್ರಿ.ಶ ಸುಮಾರು ೧೨ ರಿಂದ ೧೪ ನೇ ಶತಮಾನದ ವರಗೂ ಆಳ್ವಿಕೆಯ ಪ್ರಭಾವದಲ್ಲಿತ್ತು. ಈ ಪರಿಸರದ ಮೆಕ್ಕೆಂಬೆಯ ಕ್ರಿಶ ೧೧೪೭ ರ ಶಾಸನಗಳು, ಕೊಕಟನೂರದ ಕ್ರಿಶ ೧೨೨೫ ರ ಶಾಸನಗಳು, ಮದಭಾವಿಯ ಕ್ರಿಶ ೧೨೩೫ ರ ಶಾಸನಗಳು ಈ ಮನೆತನದ ಸಿಂಘಣ ದೇವನ (ಕ್ರಿಶ ೧೧೯೯ - ೧೨೪೭ ರ) ಶಾಸನಗಳು ಮತ್ತು ಕೊಕಟನೂರದ ಕ್ರಿಶ ೧೩೦೬ ರ ಶಾಸನವು ರಾಮಚಂದ್ರದೇವರ (ಕ್ರಿ ಶ ೧೨೭೨ ರಿಂದ ೧೩೧೨) ಆಳ್ವಿಕೆಗಳನ್ನು ಪರಿಚಯಿಸಿವೆ. ಈ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಈ ಪರಿಸರದಲ್ಲಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ಜರುಗಿರುವುದಕ್ಕೆ ಪ್ರಸ್ತುತ ಶಾಸನಗಳು ನಿದರ್ಶನವಾಗಿವೆ. ಮಾಳಖೇಡದ ರಾಷ್ಟ್ರಕೂಟ ಮನೆತನದ ಅಧೀನದಲ್ಲಿದ್ದ ಕೊಲ್ಹಾಪೂರದ ಶಿಲಾಹಾರ ಮನೆತನದ ಆಳ್ವಿಕೆಗೆ ಅಥಣಿ ಪರಿಸರ ಒಳಪಟ್ಟಿತ್ತು. ಈ ಪರಿಸರದ ಶೇಡಬಾಳದ ಕ್ರಿ.ಶ ೧೧೫೩ ರ, ಜುಗುಳದ ಕ್ರಿ.ಶ ಸುಮಾರು ೧೨ ನೇ ಶತಮಾನದ ವಿಜಯಾದಿತ್ಯನ ( ಕ್ರಿ.ಶ ೧೧೩೮ –೧೧೭೫) ಆಳ್ವಿಕೆಯ ಕಾಲಾವಧಿಯಲ್ಲಿಯು ಈ ಪರಿಸರದಲ್ಲಿ ದೇವಾಲಯಗಳ ಜೀರ್ಣೋದ್ದಾರ, ಅವುಗಳಿಗೆ ದಾನ ದತ್ತಿಗಳು ಮೊದಲಾದ ಚಟುವಟಿಕಗಳು ಜರುಗಿವೆ.[೩] ಹೊಯ್ಸಳ ಮನೆತನದ ತರುವಾಯ ರಾಜಕೀಯ ರಂಗವನ್ನು ಪ್ರವೇಶಿಸಿದ ವಿಜಯನಗರ ಮನೆತನದ (ಕ್ರಿ.ಶ ೧೧೩೬ – ೧೫೬೫) ಆಳ್ವಿಕೆಯ ಸಂದರ್ಭದಲ್ಲಿ ಆ ಮನೆತನದ ಅಧೀನದಲ್ಲಿ ಕೆಲವು ಅಧಿಕಾರಿಗಳು ಅಥಣಿ ಪರಿಸರದಲ್ಲಿ ಆಳ್ವಿಕೆ ನಡೆಸಿದ್ದಾರೆ. ಭೀಮಾ ನದಿ ತೀರದ ಅವರಾದಿ ಗ್ರಾಮದಿಂದ ಈ ಪರಿಸರಕ್ಕೆ ಆಗಮಿಸಿ ಅಧಿಕಾರಗೈದ ಗದಿಗೆಪ್ಪನ ಆಡಳಿತವನ್ನು ಮೆಚ್ಚಿದ ಆನೆಗುಂದಿಯ ರಾಮರಾಜನು ಕೊಕಟನೂರ ಗ್ರಾಮವನ್ನು ಆತನಿಗೆ ಇನಾಮವಾಗಿ ಕೊಟ್ಟನು.

೩. ಕೃಷ್ಣಮೂರ್ತಿ. "ಕಲ್ಯಾಣ ಚಾಲುಕ್ಯರು", ಮ್ಯಾಕ್ಮಿಲನ್ ಪ್ರಕಾಶನ, ದೆಹಲಿ, ೧೯೭೭, ಪು.೯೮

ಅಥಣಿ ಪರಿಸರವು ಕ್ರಿ.ಶ ೧೫೮೩ ರಿಂದ ೧೬೮೬ ರ ವರೆಗೆ ವಿಜಾಪುರದ ಅದಿಲ್ ಷಾಹಿ ಮನೆತನದ ಆಳ್ವಿಕೆಯ ಪ್ರಭಾವದಲ್ಲಿತ್ತು. ಮರಾಠರು ಪ್ರಬಲರಾಗಿ ವಿಜಾಪುರ ಸುಲ್ತಾನನಿಂದ ಈ ಪರಿಸರವನ್ನು ವಶಪಡಿಸಿಕೊಂಡು ಕ್ರಿ.ಶ ಸುಮಾರು ೧೭ ನೇ ಶತಮಾನದ ಉತ್ತರಾರ್ಧದವರೆಗೂ ಇದರ ಮೇಲೆ ತಮ್ಮ ಹಿಡಿತ ಹೊಂದಿದ್ದರು. ತರುವಾಯ ಈ ಪರಿಸರವನ್ನು ಮೊಘಲ್ ಮನೆತನದ ಅಧಿಕಾರಿ ದಿಲೋರಖಾನನು ಮರಾಠರಿಂದ ವಶಪಡಿಸಿಕೊಂಡು ಆಳಿದನು. ಇದೇ ಸಂದರ್ಭದಲ್ಲಿ ಕಾಗವಾಡದಲ್ಲಿ ತ್ರೈಯಂಬಕರಾವ್ ಪಟವರ್ಧನ ವಂಶದ ಸಂಸ್ಥಾನವಿತ್ತು. ಇದರ ಆಡಳಿತ ವ್ಯಾಪ್ತಿಯಲ್ಲಿ ೧೨೦ ಗ್ರಾಮಗಳಿದ್ದು. ಪುನಃ ಸರಕಾರದ ಅಧಿಕಾರಿ (ಪೇಶ್ವೆ) ಪೋಳನು ಈ ಪರಿಸರಕ್ಕೆ ಆಗಮಿಸಿ ಇಲ್ಲಿನ ಆಡಳಿತ ನೋಡಿಕೊಳ್ಳುತ್ತಾ ಅನೇಕ ಕೋಟೆ ಕೊತ್ತಲುಗಳನ್ನು ಕಟ್ಟಿಸಿದನು.

ಕ್ರಿ.ಶ ೧೭೨೩ ರ ನಿಜಾಮ್ ಉಲ್ ಮುಲ್ಕನು ದಕ್ಷಿಣಕ್ಕೆ ಬಂದು ಈ ಪರಿಸರದಲ್ಲಿ ಕೆಲಕಾಲ ಸ್ವತಂತ್ರವಾಗಿ ಆಳ್ವಿಕೆ ನಡೆಸಿದನು. ಆನಂತರ ಈ ಪರಿಸರವು ಕೆಲಕಾಲ ಕೊಲ್ಲಾಪೂರ ಮತ್ತು ಸಾತಾರ ಪ್ರಾಂತಗಳ ಆಡಳಿತದ ಪ್ರಭಾವದಲ್ಲಿತ್ತು. ತರುವಾಯ ಇದು ಬ್ರಿಟೀಷರ ಮುಂಬಯಿ ಪ್ರಾಂತಕ್ಕೆ ಸೇರಿತು.[೪]

೨೮/೦೪/೧೯೩೬ ರಂದು ಬೆಳಗಾವಿಯು ಜಿಲ್ಲೆಯಾಗಿ ಘೋಷಿಸಲ್ಪಟ್ಟಾಗ ಅದರಲ್ಲಿ ಅಥಣಿಯು ಒಂದು ತಾಲ್ಲೂಕಾಗಿ ಘೋಷಣೆಯಾಯಿತು. ಪ್ರಸ್ತುತ ಅಥಣಿ ತಾಲ್ಲೂಕು (ಅಥಣಿ ಮತ್ತು ಕಾಗವಾಡ) ಎರಡು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದ್ದು, ಚಿಕ್ಕೋಡಿ ಲೋಕಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟಿದೆ. ತಾಲ್ಲೂಕಿನಲ್ಲಿ ಅಥಣಿ, ಕಾಗವಾಡ, ಅನಂತಪೂರ , ತೆಲಸಂಗ ಎಂದು ನಾಲ್ಕು ಹೋಬಳಿಗಳಿದ್ದು , ೮೯ ಹಳ್ಳಿಗಳ ಜೊತೆಗೆ ೨೭ ಮಜರೆ ಹಳ್ಳಿಗಳಿವೆ. ೫೧ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಹಾಗೂ ೧ ಜಿಲ್ಲಾ ಪಂಚಾಯಿತಿ ಇದ್ದು ಒಂದು ಪುರಸಭೆಯನ್ನು ಹೊಂದಿದೆ. ಒಟ್ಟು ತಾಲ್ಲೂಕಿನ ವಿಸ್ತೀರ್ಣ ೧೯೯೫.೭ ಚ.ಕೀ.ಮೀ.

ಅಥಣಿ ತಾಲ್ಲೂಕು ಮಹಾರಾಷ್ಟ್ರದ ಜತ್ತ್ ತಾಲ್ಲೂಕು ಮತ್ತು ಸಾಂಗಲಿ ಜಿಲ್ಲೆಗೆ ಹಾಗೂ ವಿಜಾಪುರ ಜಿಲ್ಲೆಗೆ ಹೊಂದಿಕೊಂಡ ಮಳೆ ಆಶ್ರಯಿತ ಪ್ರದೇಶವಾಗಿದೆ. ಸದಾ, ಬರಗಾಲಕ್ಕೆ ಸಿಲುಕುತ್ತಿದೆ. ಕೃಷ್ಣ ನದಿ ದಂಡೆಯಲ್ಲಿ ಬರುವ ಗ್ರಾಮಗಳು ಮಾತ್ರ ನೀರಾವರಿ ಪ್ರದೇಶವನ್ನು ಹೊಂದಿದ್ದು, ಕಬ್ಬನ್ನು ಪ್ರಮುಖ ಬೆಳೆಯನ್ನಾಗಿ ಬೆಳೆಯಲಾಗುತ್ತದೆ.

---

೪. ಮುಗಳಿ.ಆರ್.ಎಸ್. ಹೆರಿಟೇಜ್ ಆಫ್ ಕರ್ನಾಟಕ, ಬೆಂಗಳೂರು, ೧೯೪೬, ಪು,೧೩೪.


ಬೆಳಗಾಂವ ಜಿಲ್ಲೆ
ಅಥಣಿ
ರಾಯಬಾಗ
ಚಿಕ್ಕೋಡಿ
ಹುಕ್ಕೇರಿ
ಗೋಕಾಕ
ರಾಮದುರ್ಗ
ಮಲಪ್ರಭಾ ನದಿ
ಬೆಳಗಾಂವ
ಬೈಲಹೊಂಗಲ
ಸವದತ್ತಿ
ಖಾನಾಪುರ
ಧಾರವಾಡ ಜಿಲ್ಲೆ
ಉ.ಕ. ಜಿಲ್ಲೆ
ಉ

## ೩.೨ ಭೌಗೋಳಿಕ ಇತಿಹಾಸ

ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲಿ ಅಥಣಿ ತಾಲ್ಲೂಕು ಒಂದು . ಇದು ಮೈದಾನ ಪ್ರದೇಶವಾಗಿದ್ದು ಕಲ್ಲು ಶಿಲೆಗಳಿಂದ ನಿರ್ಮಿತವಾಗಿದೆ. ಬೆಳಗಾವಿ ಜಿಲ್ಲೆಯ ಉತ್ತರಕ್ಕಿರುವ ಈ ತಾಲ್ಲೂಕು ಮಹಾರಾಷ್ಟ್ರಕ್ಕೆ ಹೊಂದಿರುವುದರಿಂದ ಗಡಿ ತಾಲ್ಲೂಕಾಗಿದೆ. ಉತ್ತರ ಮತ್ತು ಪಶ್ಚಿಮದಲ್ಲಿ ಮಾಹಾರಾಷ್ಟ್ರ ರಾಜ್ಯವಿದ್ದು, ಕೊಲ್ಹಾಪುರ ಸಾಂಗ್ಲಿ ಜಿಲ್ಲೆಗಳು ಗಡಿ ಪ್ರದೇಶಗಳಾಗಿವೆ. ಈಶಾನ್ಯ ಮತ್ತು ಪೂರ್ವದಲ್ಲಿ ಬಿಜಾಪೂರ ಜಿಲ್ಲೆ, ಆಗ್ನೇಯದಲ್ಲಿ ಬಾಗಲಕೋಟ ಜಿಲ್ಲೆ, ದಕ್ಷಿಣಕ್ಕೆ ರಾಯಭಾಗ ತಾಲ್ಲೂಕು, ಈಶಾನ್ಯಕ್ಕೆ ಚಿಕ್ಕೋಡಿ ತಾಲ್ಲೂಕುಗಳು ಸಮಾವೇಶವಾಗಿವೆ. ಇದು ೧೬.೩೦ ಉತ್ತರ ಅಕ್ಷಾಂಶದಿಂದ ೧೬.೫೮ ಉತ್ತರ ಅಕ್ಷಾಂಶಗಳ ಮಧ್ಯೆ ಹಾಗೂ ೭೪.೪೦ ಪೂರ್ವ ರೇಖಾಂಶದಿಂದ ೭೫.೨೧ ಪೂರ್ವ ರೇಖಾಂಶಗಳ ಮಧ್ಯೆ ಹರಡಿಕೊಂಡಿದೆ. ಸಮುದ್ರ ಮಟ್ಟದಿಂದ ಸರಾಸರಿ ೪೫೦-೮೦೦ ಮೀ ಎತ್ತರದಲ್ಲಿದ್ದು ಜಿಲ್ಲೆಯಲ್ಲಿಯೇ ಹೆಚ್ಚು ವಿಸ್ತೀರ್ಣ ಹೊಂದಿದ ತಾಲ್ಲೂಕು ಪ್ರದೇಶವಾಗಿದೆ. ೧೯೯೫.೭ ಚ. ಕಿ. ಮೀ. ವಿಸ್ತೀರ್ಣ ಹೊಂದಿದೆ. ತಾಲ್ಲೂಕಿನ ವಾಡಿಕೆಯ ಮಳೆಯ ಪ್ರಮಾಣ ೫೮೧.೬ ಮಿ.ಮೀ ಇದೆ. ಸ್ವಾಭಾವಿಕವಾಗಿ ಹೇಳಬೇಕೆಂದರೆ ಅಥಣಿ ತಾಲ್ಲೂಕು ಶುಷ್ಕವಲಯದಲ್ಲಿ ಸ್ಥಾಪಿತಗೊಂಡಿದ್ದು, ಕೃಷ್ಣ ನದಿಯ ಉತ್ತರಕ್ಕೆ ಹರಡಿಕೊಂಡಿರುವ ತಾಲ್ಲೂಕಿನ ಭೂ ಪ್ರದೇಶ ಅಲ್ಲಲ್ಲಿ ಏರು ಪೇರುಗಳಿಂದ ಕೂಡಿದ್ದು ಬಿಟ್ಟರೆ ಸಮತಟ್ಟಾದ ಮೈದಾನ ಪ್ರದೇಶವಾಗಿದೆ. ಪಶ್ಚಿಮದಿಂದ ಪೂರ್ವಕ್ಕೆ ನಿಧಾನ ಇಳಿಜಾರು ಹೊಂದಿದೆ. ತಾಲ್ಲೂಕನ್ನು ಪ್ರಾಕೃತಿಕವಾಗಿ ಉತ್ತರ ಮತ್ತು ಈಶಾನ್ಯ ಮರುಭೂಮಿ ಮೈದಾನ ಪ್ರದೇಶವೆಂದು ವಿಂಗಡಿಸಲಾಗಿದೆ. ತಾಲ್ಲೂಕಿನ ಉತ್ತರ ಮತ್ತು ಈಶಾನ್ಯದ ಭೂ ಪ್ರದೇಶವು ಸಮುದ್ರ ಮಟ್ಟದಿಂದ ೯೦೦ ರಿಂದ ೬೦೦ ಮೀ ಎತ್ತರವಾಗಿದೆ. ದಕ್ಷಿಣ ಪೂರ್ವ ನೈಋತ್ಯ , ಪಶ್ಚಿಮ ಭಾಗಗಳಲ್ಲಿ ಮೈದಾನದಿಂದ ಕೂಡಿದ್ದು, ಇಲ್ಲಿನ ಭೂಮಿಯ ಎತ್ತರ ಸಮುದ್ರ ಮಟ್ಟದಿಂದ ೨೦೦ ರಿಂದ ೬೦೦ ಮೀ ಇದೆ.

ತಾಲ್ಲೂಕಿನಲ್ಲಿ ಕೃಷ್ಣಾನದಿಯು ಏಕೈಕ ಮತ್ತು ದೊಡ್ಡ ನದಿಯಾಗಿದ್ದು, ೯೬ ಕಿಮೀ ಉದ್ದ ಈ ತಾಲ್ಲೂಕಿನಲ್ಲಿ ಹರಿಯುತ್ತದೆ.. ೩೩ ಹಳ್ಳಿಗಳು ನದಿ ದಡದಲ್ಲಿವೆ. ಮೊಸಾಲ್ಟ ಶಿಲೆಯಿಂದ ಉದ್ಭವಿಸಿದ ಕಪ್ಪು ಮಣ್ಣು ಅಲ್ಲದೇ ಕೆಂಪು ಮಣ್ಣು ತಾಲ್ಲೂಕಿನಲ್ಲಿ ಹಂಚಿಕೆಯಾಗಿದ್ದು, ಅನೇಕ ಬೆಟ್ಟ, ಪ್ರಸ್ಥಭೂಮಿ ಪ್ರದೇಶಗಳಲ್ಲಿ ಗರಸು ಹರಡಿದ್ದು, ತೋಟಗಾರಿಕೆಗೆ ಉತ್ತಮವಾಗಿದೆ. ಕೃಷ್ಣ ತೀರದ ಉತ್ತರ ಭಾಗದಲ್ಲಿ ಕಪ್ಪು ಹಾಗೂ ನಕಲು ಸಂಚಯನ ಅಧಿಕವಾಗಿದ್ದು, ಕಂದು ಕೆಂಪು ಮಿಶ್ರಿತ ಮಣ್ಣಿನ ಹಂಚಿಕೆಯಿದೆ.

## ೩.೩ ಹವಾಮಾನ ಮತ್ತು ಮಳೆಯ ಸಾಂದ್ರತೆ

ಅಥಣಿ ತಾಲ್ಲೂಕು ಸ್ವಾಭಾವಿಕವಾಗಿ ಹೆಚ್ಚು ಬಿಸಿಯುಕ್ತ ಹವಾಮಾನ ಹೊಂದಿದ್ದು, ಅತಿ ಕಡಿಮೆ ಮಳೆ ಬೀಳುವ ಪ್ರದೇಶವಾಗಿದೆ. ಚಳಿಗಾಲವು ಡಿಸೆಂಬರಿನಿಂದ ಫೆಬ್ರವರಿ ತಿಂಗಳವರೆಗೆ ಇದ್ದು , ಬೇಸಿಗೆ ಕಾಲವು ಫೆಬ್ರವರಿ ಕೊನೆಯಿಂದ ಜೂನ್ ಪ್ರಾರಂಭದವರೆಗೆ ಇರುತ್ತದೆ. ಬೇಸಿಗೆಯು ೧೮° ಯಿಂದ ಕೂಡಿದ್ದು ಮಾರ್ಚನಿಂದ ಮೇ ವರೆಗೆ ಉಷ್ಣಾಂಶವು ಏರಿಕೆಯ ಪ್ರಮಾಣದಲ್ಲಿರುತ್ತದೆ. ಎಪ್ರಿಲ್ ಹಾಗೂ ಮೇ ತಿಂಗಳ ಅವಧಿಯು ಬಿಸಿಲಿನಿಂದ ಕೂಡಿದ್ದು, ಇಲ್ಲಿನ ಗರಿಷ್ಠ ತಾಪಮಾನ ೩೦° ಇರುತ್ತದೆ. ಇದು ಕೆಲವು ವೇಳೆ ೪೦° ವರೆಗೂ ಇರುತ್ತದೆ. ಜೂನ್ ತಿಂಗಳಿನಿಂದ ನವ್ಹೆಂಬರ ತಿಂಗಳವರೆಗೆ ಹೆಚ್ಚು ತೇವಾಂಶದಿಂದ ಕೂಡಿರುತ್ತದೆ.

ಅಥಣಿ ತಾಲ್ಲೂಕಿಗೆ ಪೂರ್ವ ನೈಋತ್ಯ ಮಾರುತಗಳು ಮೇ ತಿಂಗಳ ಕೊನೆಯ ಭಾಗದಲ್ಲಿ ಮತ್ತು ಜೂನ್ ತಿಂಗಳ ಆರಂಭದಲ್ಲಿ ಪ್ರಾರಂಭವಾಗುತ್ತವೆ. ನೈರುತ್ಯ ಮಾರುತಗಳಿಂದ ತಾಲ್ಲೂಕಿನ ಎಲ್ಲಾ ಭಾಗಗಳಲ್ಲಿ ಸಮಾನವಾಗಿ ಮಳೆ ಬೀಳುತ್ತದೆ. ತಾಲ್ಲೂಕಿನಲ್ಲಿ ಪ್ರತಿ ವರ್ಷ ಸರಾಸರಿ ೫೮೭ ಮಿ.ಮಿ ನಷ್ಟು ಮಳೆಯಾಗುತ್ತದೆ. ವರ್ಷದಲ್ಲಿ ಕೇವಲ ೪೦ ದಿನಗಳು ಮಾತ್ರ ಮಳೆ ಬೀಳುತ್ತದೆ. ಮಳೆ ಪ್ರಮಾಣವನ್ನು ಕೋಷ್ಟಕ ೩.೧ ರಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೩.೧ :**

**ತಾಲ್ಲೂಕುವಾರು ಮಳೆಯ ಪ್ರಮಾಣ**

| ಕ್ರ ಸಂ | ಅಥಣಿ ತಾಲ್ಲೂಕು | ೧೯೦೧-೭೦ | ೨೦೦೫ | ೨೦೦೬ |
|---|---|---|---|---|
| ೦೧ | ಹಂಚಿಕೆ ಮಳೆ | ೫೮೧.೬ | ೫೪೧.೦ | ೬೯೮.೫ |
| ೦೨ | ವಾಸ್ತವಿಕ ಮಳೆ | ೫೧೪.೧ | ೫೦೩.೦ | ೫೪೦.೫ |

ಆಕರ: ಜಿಲ್ಲಾ ಅಂಕಿ ಸಂಖ್ಯಾ ಸಂಗ್ರಹ ಕಛೇರಿ , ಬೆಳಗಾವಿ. ೨೦೦೫-೦೬

## ೩.೪ ನೈಸರ್ಗಿಕ ಸಂಪತ್ತು

ಯಾವದೇ ದೇಶದ ಉತ್ತಮ ಆರ್ಥಿಕ ಸ್ಥಿತಿಯು ಆಯಾ ಪ್ರದೇಶದಲ್ಲಿ ದೊರೆಯುವ ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಉದಾ : ನದಿ, ಕಾಡು, ಖನಿಜ, ವ್ಯವಸಾಯ ಉತ್ಪನ್ನ ಮೊದಲಾದ ಮೂಲಗಳು.

## ೩.೫ ಖನಿಜ ಸಂಪತ್ತು

ಅಥಣಿ ತಾಲ್ಲೂಕಿನಲ್ಲಿ ಶಿಲೆಗಳು, ಮರಳು, ಕಪ್ಪು ಹಂಚು, ಇಟ್ಟಿಗೆಗೆ ಬೇಕಾದ ಮಣ್ಣು ಇತ್ಯಾದಿಗಳು ಖನಿಜ ಸಂಪನ್ಮೂಲಗಳಾಗಿವೆ. ಅಗ್ರಾಣಿ ಹಿರೇಹಳ್ಳ, ಕೇಸರಾಳ, ಡೋಣಿ, ಕೃಷ್ಣಾನದಿ ತೀರದಲ್ಲಿ ಮರಳು ಹೇರಳವಾಗಿ ಸಿಗುವದರಿಂದ ಕಟ್ಟಡಗಳ ನಿರ್ಮಾಣಕ್ಕೆ ಬಳಸಲಾಗುತ್ತದೆ. ಇಲ್ಲಿಯ ಫಲವತ್ತಾದ ಮಣ್ಣನ್ನು ಇಟ್ಟಿಗೆ, ಹಂಚು, ಮಡಿಕೆ ತಯಾರಿಕೆಯಲ್ಲಿ ಬಳಸುತ್ತಾರೆ.

## ೩.೬ ಅರಣ್ಯ

ಅಥಣಿ ತಾಲ್ಲೂಕು ಕಡಿಮೆ ಪ್ರಮಾಣದ ಅರಣ್ಯ ಪ್ರದೇಶವನ್ನು ಹೊಂದಿದೆ. ತಾಲ್ಲೂಕಿನ ವಿಸ್ತೀರ್ಣದಲ್ಲಿ ಕೇವಲ ಶೇಕಡಾ ೦.೨೯ ರಷ್ಟು ಅರಣ್ಯವಿದೆ. ಅಂದರೆ ಸುಮಾರು ೫೮೧ ಹೆಕ್ಟರ ಭೂಮಿ ಅರಣ್ಯವಿದೆ. ೧೦೮೩.೨ ಹೆಕ್ಟರ ಸಾಗುವಳಿ ಇಲ್ಲದ ಭೂಮಿಯನ್ನು ಅರಣ್ಯೀಕರಣಗೊಳಿಸಬೇಕಾಗಿದೆ. ತಾಲ್ಲೂಕಿನಲ್ಲಿ ಯಾವುದೇ ರಕ್ಷಿತ, ಕಾಯ್ದಿಟ್ಟ ಅರಣ್ಯಗಳಿಲ್ಲ. ಕೃಷ್ಣಾ ತೀರದಲ್ಲಿ ಮುಖ್ಯವಾಗಿ ಮಾಶ್ವಾಲ್, ತಲ್ಲಿ, ಕಾಕೈ, ದಿಲಡಾಲ್ ಬೇವು, ತೆಂಬುರ್ಲ್ನಿ ಕೈರ್, ಬಲ್ಲಾದ, ಸಾಗವಾನಿ, ಶ್ರೀಗಂಧ, ಬಂದಾತಿ, ತಾರವಾಡ, ಕೌಳಿ ಮುಂತಾದ ಸಸ್ಯ ವರ್ಗವಿದೆ. ಹಾಗೆ ಮೈದಾನ ಪ್ರದೇಶದಲ್ಲಿ ಜಾಲಿ, ಹುಲಗಲ, ನೇರಳೆ, ಬೇವು, ಶ್ರೀಗಂಧ, ಹುಣಸೆ, ಬೋರಡ, ಆಲ, ಬಿದಿರು, ಮುಂತಾದವುಗಳನ್ನು ಕಾಣಬಹುದು.

## ೩.೭ ನದಿ ಮತ್ತು ತೊರೆಗಳು

ಅಥಣಿ ತಾಲ್ಲೂಕು ಕೃಷ್ಣಾ ಜಲಾಯನದ ಅಡಿಯಲ್ಲಿ ಬರುತ್ತದೆ. ರಾಜ್ಯದ ಪ್ರಮುಖ ನದಿಗಳಲ್ಲೊಂದಾದ ಕೃಷ್ಣಾನದಿಯು ತಾಲ್ಲೂಕಿನ ಜೀವನಾಡಿಯಾಗಿದೆ. ಮಹಾರಾಷ್ಟ್ರದ ಸಾತಾರ ಜಿಲ್ಲೆಯ ಮಾಹಾಬಳೇಶ್ವರ ಎಂಬ ಸಹ್ಯಾದ್ರಿ ಶ್ರೇಣಿಯಲ್ಲಿ ಉಗಮ ಹೊಂದಿ, ಪ್ರಥಮವಾಗಿ ಕರ್ನಾಟಕದ ಅಥಣಿಯ

ತಾಲ್ಲೂಕಿನ ಮಂಗಾವತಿ ಬಳಿ ಪ್ರವೇಶಿಸಿಸುತ್ತದೆ. ತಾಲ್ಲೂಕಿನಲ್ಲಿ ಸುಮಾರು ೯೬ ಕಿ.ಮೀ ಉದ್ದ ೩೩ ಹಳ್ಳಿಗಳ ನೀರಾವರಿಗೆ ಅನೂಕುಲವಾಗಿದೆ. ಕೃಷ್ಣಾನದಿಯ ಹಿಪ್ಪರಗಿ ಆಣೆಕಟ್ಟು ಯೋಜನೆ ಪೂರ್ಣಗೊಂಡಿದ್ದು, ತಾಲ್ಲೂಕಿನ ೧೦೦೨೫ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ದೊರೆಯಲಿದೆ. ಇದರ ಅಡಿಯಲ್ಲಿ ಕೃಷ್ಣಾನದಿಗೆ ಕಟ್ಟಲಾಗಿರುವ ಮಹಿಷವಾಡಗಿ ಬ್ಯಾರೆಜ್ ಹಾಗೂ ಉಗಾರ್ ಬ್ಯಾರೆಜ್‌ಗಳಿಂದ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ಅಲ್ಲದೆ ಘಟಪ್ರಭಾ ಎಡದಂಡೆ ಕಾಲುವೆ ಮುಖಾಂತರ ತಾಲ್ಲೂಕಿನ ೧೭೮೪ ಹೆಕ್ಟರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ಅಷ್ಟೇ ಅಲ್ಲದೆ ದೋಣಿ, ಅಗ್ರಾಣಿ, ಹಿರೇಹಳ್ಳ, ಕೆಸರಳ್ಳ, ಊರಹಳ್ಳ, ಮುಂತಾದ ೧೨ ಹಳ್ಳಗಳಿಂದ ಹಾಗೂ ಸುಮಾರು ೧೪ ನೀರಾವರಿ ಕೆರೆಗಳಿಂದ ನೀರಾವರಿ ಸೌಲಭ್ಯ ಕಲ್ಪಿಸಲಾಗಿದ್ದು, ತೆರೆದ ಬಾವಿಗಳಿಂದ ೧೮೧೯ ಹೆಕ್ಟೆರ, ಕೊಳವೆ ಬಾವಿಗಳಿಂದ ೬೨೮೧ ಹೆಕ್ಟೆರ್, ಏತ ನೀರಾವರಿಯಿಂದ ೪೩೫೦೯, ಹಳ್ಳ ಹಾಗೂ ಇತರ ಮೂಲಗಳಿಂದ ೧೭೫೮೧ ಹೆಕ್ಟೆರ್ ಸೇರಿದಂತೆ ಒಟ್ಟು ೮೬೭೬೪ ಹೆಕ್ಟೆರ್ ಭೂಮಿಯನ್ನು ನೀರಾವರಿಗೆ ಒಳಪಡಿಸಲಾಗಿದೆ. ಅಲ್ಲದೆ ಕೃಷ್ಣಾ ನದಿಯ ಯೋಜನೆಗಳಾದ ಕರಿಮಸೂತಿ ಹಾಗೂ ಖಿಳೇಗಾಂವ ಬಸವೇಶ್ವರ ಏತ ನೀರಾವರಿ ಯೋಜನೆಗಳು ಪ್ರಗತಿಯಲ್ಲಿದ್ದು, ಅವು ಪೂರ್ಣಗೊಂಡರೆ ತಾಲ್ಲೂಕಿನ ಉತ್ತರ ಭಾಗ ಸಮಗ್ರ ನೀರಾವರಿಗೆ ಒಳಪಡುತ್ತದೆ. ಅಥಣಿ ತಾಲ್ಲೂಕಿನ ವಾರ್ಷಿಕ ಸರಾಸರಿ ೫೮೧.೬ ಮೀಟರ್ ಮಳೆ ಪ್ರಮಾಣವಿದ್ದು, ಭೂಮಿಗಳ ಅಂತರ್ಜಲ ಸರಾಸರಿ ೯.೩೬ ಹಳ್ಳ ಮತ್ತು ಕಾಲುವೆ ಬಾವಿಗಳ ಅಂತರ್ಜಲ ಲಭ್ಯತೆ ಸರಾಸರಿ ೧೩.೮ ಮೀ. ಆಳವಾಗಿದೆ.

## ೩.೮ ಮತ್ಸ್ಯ ಸಂಪನ್ಮೂಲ

ತಾಲ್ಲೂಕಿನಲ್ಲಿ ಕೃಷ್ಣಾನದಿ ವಿಶಾಲವಾಗಿ ಹರಿಯುತ್ತಿದ್ದು, ನದಿ ತೀರವು ಮೀನುಗಾರಿಕೆಗೆ ಅನುಕೂಲವಾಗಿದೆ. ಅಲ್ಲದೆ ತಾಲ್ಲೂಕಿನಲ್ಲಿ ೧೪ ಕೆರೆಗಳಲ್ಲಿ ಕೂಡ ಮೀನುಗಾರಿಕೆ ಕೈಗೊಳ್ಳಬಹುದು. ಮುಖ್ಯವಾಗಿ ಕೋಹಳ್ಳಿ ಕೆರೆ, ಐಗಳಿ ಕೆರೆ, ಗೆಜ್ಜನ ಕೋಡಿ ಕೆರೆಗಳು ಮೀನುಗಾರಿಕಾ ಪ್ರದೇಶಗಳಾಗಿವೆ.

**ಕೋಷ್ಟಕ ೩.೨**

**ಅಥಣಿ ತಾಲ್ಲೂಕಿನ ನೀರಾವರಿಯಾದ ನಿವ್ವಳ ಪ್ರದೇಶ**

| ಕಾಲುವೆಗಳಿಂದ | ಕೆರೆಗಳಿಂದ | ಬಾವಿಗಳಿಂದ | ಕೊಳವೆಗಳಿಂದ | ಏತ ನೀರಾವರಿ | ಇತರೆ | ಒಟ್ಟು |
|---|---|---|---|---|---|---|
| ೨೭೯೬ | ೦ | ೧೮೪೮೧ | ೭೦೪೩ | ೩೩೬೫೨ | ೧೯೨೬ | ೭೨೯೮ |

ಮೂಲ:ಜಿಲ್ಲಾ ಅಂಕಿ ಸಂಖ್ಯಾ ಸಂಗ್ರಹ ಕಛೇರಿ , ಬೆಳಗಾವಿ. ೨೦೦೫-೦೬

## ೩.೯ ಪಶು ಪಾಲನೆ

ಆರ್ಥಿಕವಾಗಿ ಪಶುಪಾಲನೆಯು ಗ್ರಾಮೀಣ ಮಟ್ಟದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಗ್ರಾಮೀಣ ಮಟ್ಟದ ರೈತರು ಹೆಚ್ಚು ಪ್ರಮಾಣದಲ್ಲಿ ಹಸು ಮತ್ತು ಎಮ್ಮೆಗಳನ್ನು ಸಾಕುತ್ತಿದ್ದು, ಇವುಗಳಿಂದ ದೊರೆಯುವ ಹಾಲಿನಿಂದ ಮತ್ತು ಸಗಣಿಯಿಂದ ಆದಾಯ ಗಳಿಸುತ್ತಾರೆ. ಇದರಿಂದ ರೈತರಿಗೆ ಸ್ವಲ್ಪ ಮಟ್ಟಿನ ಆರ್ಥಿಕ ಸಹಾಯ ದೊರೆಯುವಂತಾಗಿದೆ. ಇದರಂತೆ ಉಣ್ಣೆ, ಚರ್ಮ ಮತ್ತು ಮಾಂಸಕ್ಕಾಗಿ ಕುರಿ, ಆಡು ಮತ್ತು ಕೋಳಿ ಸಾಗಾಣಿಕೆ ಮಾಡುತ್ತಾರೆ. ಇಲ್ಲಿನ ಬಹುಪಾಲು ಉತ್ಪಾದಿಸುವ ಹಾಲು ದಿನನಿತ್ಯ ಮಹಾರಾಷ್ಟ್ರದ ಮಾರುಕಟ್ಟೆಗೆ ಹೋಗುತ್ತಿದೆ. ವಿಜಾಪುರದ ಮೂಲದ ಶ್ರೀ ಸಿದ್ಧೇಶ್ವರ ಹಾಲು ಉತ್ಪಾದಕರ ಸಹಕಾರಿ ಸಂಘ ತಾಲ್ಲೂಕಿನಲ್ಲಿ ವ್ಯಾಪಕವಾಗಿ ಹೈನುಗಾರಿಕೆಗೆ ಪ್ರೋತ್ಸಾಹ ನೀಡುತ್ತಿದೆ.

**ಕೋಷ್ಟಕ ೩.೩**
**ಪಶು ಸಂಗೋಪನೆ**

| ಕ್ರ.ಸಂ | ಜಾನುವಾರಗಳ ವಿವರ | ತಳಿಗಳು | | | |
|---|---|---|---|---|---|
| | | ಸ್ಥಳೀಯ | ವಿದೇಶಿ | ಮಿಶ್ರತಳಿ | ಒಟ್ಟು |
| ೦೧ | ಆಕಳು | ೫೯೮೨೨ | - | ೨೦೯೩ | ೬೧೯೧೫ |
| ೦೨ | ಎಮ್ಮೆಗಳು | ೯೬೨೨೧ | ೩೨೪೦೧ | - | ೧೨೮೬೨೨ |
| ೦೩ | ಹಂದಿಗಳು | ೨೭೪೦ | - | ೧೩೨ | ೨೮೭೨ |
| ೦೪ | ಮೊಲಗಳು | ೨೭ | - | - | ೨೭ |
| ೦೫ | ಕೋಳಿಗಳು | ೮೮೮೧೭ | - | - | ೮೮೮೧೭ |
| ೦೬ | ಇತರೆ | ೨೩೦ | - | - | ೨೩೦ |

ಆಕರ : ಜಿಲ್ಲಾ ಅಂಕಿ ಅಂಶಗಳ ಸಂಗ್ರಹ ಕಛೇರಿ ಬೆಳಗಾವಿ. ೨೦೦೬-೦೭.

## ೩.೧೦ ರೇಷ್ಮೇ ಸಾಗಾಣಿಕೆ

ಅಥಣಿ ತಾಲ್ಲೂಕಿನ ಒಟ್ಟು ಭೌಗೋಳಿಕ ಕ್ಷೇತ್ರ ೧,೯೯,೫೧೩ ಇದ್ದು, ಇದರಲ್ಲಿ ಪೂರ್ವ ಭಾಗದ ಐಗಳಿ, ತೆಲಸಂಗ ಮುಂತಾದ ಕಡೆಗಳಲ್ಲಿ ರೇಷ್ಮೆ ವ್ಯವಸಾಯದಲ್ಲಿ ಒಟ್ಟು 282 ರೈತರು ತೊಡಗಿಕೊಂಡಿದ್ದಾರೆ. ತಾಲ್ಲೂಕಿನಲ್ಲಿ ರೂ ೯೪.೧೬೬ ಲಕ್ಷ ಮೌಲ್ಯದ ರೇಷ್ಮೆ ಉತ್ಪಾದನೆ ಮಾಡುತ್ತಿದ್ದಾರೆ. ಅದರ ವಿವರಣೆಯನ್ನು ಕೋಷ್ಟಕ ೩.೪ ರಲ್ಲಿ ವಿವರಿಸಲಾಗಿದೆ.

**ಕೋಷ್ಟಕ – ೩.೪**

**ಅಥಣಿ ತಾಲ್ಲೂಕಿನ ರೇಷ್ಮೆ ಉತ್ಪಾದನೆಯ ಬೆಳವಣಿಗೆ**

| ಹಿಪ್ಪು ನೇರಳೆ ಬೆಳೆ ವಿಸ್ತೀರ್ಣ | ರೇಷ್ಮೆ ಗೂಡು ಉತ್ಪಾದನೆ (ಟನ್ನುಗಳಲ್ಲಿ) | ಕಸಬು ಕೈಗೊಂಡ ರೈತರ ಸಂಖ್ಯೆ | ಉತ್ಪಾದಿಸಿದ ರೇಷ್ಮೆಯ ಮೌಲ್ಯ ಲಕ್ಷ ರೂ ಗಳಲ್ಲಿ |
|---|---|---|---|
| ೧೨೯.೮೦ | ೬೨.೭೭೭ | ೨೮೨ | ೯೪.೧೬೬ |

ಆಕರ: ಉಪ ನಿರ್ದೇಶಕರು ರೇಷ್ಮೆ ಇಲಾಖೆ ಬೆಳಗಾವಿ. ೨೦೦೬-೦೭.

## ೩.೧೧ ಸಾರಿಗೆ

ಅಥಣಿ ಐತಿಹಾಸಿಕ ಕಾಲದಿಂದಲೂ ಆಯಕಟ್ಟಿನ ಸ್ಥಳವಾಗಿ, ಗೋವೆ- ಕೊಂಕಣ ಪ್ರದೇಶಗಳಿಗೆ ಹೋಗುವ ಮಹಾದ್ವಾರವಾಗಿತ್ತು. ಅದಕ್ಕೆ ಸಾಕ್ಷಿಯಾಗಿ ಪ್ರಸ್ತುತ ಹೈದರಾಬಾದ, ಗೋವಾ ಸಂಪರ್ಕಿಸುವ ರಾಜ್ಯ ಹೆದ್ದಾರಿ ( ಸಂಕೇಶ್ವರ - ಜೇವರಗಿ ) ಅಥಣಿ ಮಾರ್ಗವಾಗಿ ಹಾಯ್ದು ಹೋಗುತ್ತದೆ. ಮಹಾರಾಷ್ಟ್ರದ ಜತ್ತದಿಂದ ಗೋವಾ ರಾಜಧಾನಿ ಪಣಜಿಗೆ ಸಂಪರ್ಕಿಸುವ (ಜತ್ತ-ಜಾಂಬೋಟಿ) ರಾಜ್ಯ ಹೆದ್ದಾರಿ ಅಥಣಿ ಮೂಲಕ ಹಾಯ್ದು ಹೋಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ ವ್ಯವಸ್ಥೆ ಕಲ್ಪಿಸಲಾಗಿದೆ. ಅಲ್ಲಿಂದ ನವದೆಹಲಿ - ಕನ್ಯಾಕುಮಾರಿ ಸಂಪರ್ಕದ ರೈಲು ಮಾರ್ಗವು ಕರ್ನಾಟಕದಲ್ಲಿ ಪ್ರವೇಶಿಸುವುದು. ( ಪಶ್ಚಿಮ ವಲಯದಲ್ಲಿ) ಅಥಣಿಯಿಂದ ೩೫ ಕಿಮೀ ದೂರದಲ್ಲಿರುವ ಶೇಡಬಾಳ ಮತ್ತು ಉಗಾರ ಖುರ್ದ ಎರಡು ರೇಲ್ವೆ ನಿಲ್ದಾಣಗಳಿದ್ದು ಹಾಗೂ ೬೦ ಕಿ ಮೀ ಅಂತರದ ಮಿರಜ್ ಜಂಕ್ಷನ್ ಕೂಡ ರೇಲ್ವೆ ಸಂಪರ್ಕಕ್ಕೆ ಅನೂಕೂಲವಾಗಿದೆ. ಅಥಣಿ ತಾಲ್ಲೂಕಿನಲ್ಲಿನ ವಾಹನಗಳನ್ನು ಕೋಷ್ಟಕ ೩.೫ ರಲ್ಲಿ ಕಾಣಬಹುದು.

**ಕೋಷ್ಟಕ – ೩.೫**

**ಅಥಣಿ ತಾಲ್ಲೂಕು ಸಾರಿಗೆ ಮತ್ತು ಸಂಪರ್ಕಗಳು**

| ಮೋಟರ ಸೈಕಲ್ | ಕಾರುಗಳು | ಬಾಡಿಗೆ ಕಾರುಗಳು | ಅಟೋ ರಿಕ್ಷಾಗಳು | ಮಿನಿ ಬಸ್ಸುಗಳು | ಟ್ರ್ಯಾಕ್ಟರ ಮತ್ತು ಟ್ರೇಲರ್ | ಅಂಬುಲೆನ್ಸ | ಸರಕು ಸಾಗಿಸುವ ವಾಹನಗಳು | ಇತರೆ | ಒಟ್ಟು |
|---|---|---|---|---|---|---|---|---|---|
| ೨೦೭೯೭ | ೮೩೩ | ೪೩ | ೩೧ | ೫೧೨ | ೪೫೩೦ | ೫ | ೭೪೨ | ೨೪೦ | ೨೮೦೧೨ |

ಮೂಲ : ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕೋಡಿ.೨೦೦೭-೦೮

## ೩.೧೨ ಅಂಚೆ ಮತ್ತು ತಂತಿ ಕಛೇರಿ

ಅಥಣಿಯಲ್ಲಿ ಬ್ರಿಟೀಷರ ಕಾಲದಿಂದಲೂ ಪ್ರಧಾನ ಅಂಚೆ ಕಛೇರಿ ಇದೆ ಹಾಗೂ ಪ್ರಸ್ತುತ ತಾಲ್ಲೂಕಿನಾದ್ಯಂತ ಒಟ್ಟು ೮೮ ಅಂಚೆ ಕಛೇರಿಗಳು ಕಾರ್ಯ ನಿರ್ವಹಿಸುತ್ತಿವೆ. ಮತ್ತು ೨೬ ದೂರವಾಣಿ ವಿನಿಮಯ ಕೇಂದ್ರಗಳನ್ನು ಒಳಗೊಂಡಿದೆ. ಇವುಗಳ ವಿವರಣೆಯನ್ನು ಕೆಳಗಿನ ಕೋಷ್ಟಕ ೩.೬ ರಲ್ಲಿ ಕೊಡಲಾಗಿದೆ.

**ಕೋಷ್ಟಕ – ೩.೬**

**ಅಂಚೆ ಮತ್ತು ತಂತಿ ಕಛೇರಿ**

| ಅಂಚೆ ಕಛೇರಿಗಳು | ತಂತಿ ಕಛೇರಿಗಳು | ದೂರವಾಣಿ ಕೇಂದ್ರಗಳು | ದೂರವಾಣಿಗಳು |
|---|---|---|---|
| ೮೮ | ೦೧ | ೨೬ | ೧೩೯೨೬ |

ಆಕರ : ಜಿಲ್ಲಾ ಅಂಕಿ ಅಂಶಗಳ ಸಂಗ್ರಹಣಾ ಕಛೇರಿ, ಬೆಳಗಾವಿ ೨೦೦೬–೦೭.

## ೩.೧೩ ಬ್ಯಾಂಕಿಂಗ್

ಗ್ರಾಮೀಣ ಅಭಿವೃದ್ಧಿಯಲ್ಲಿ ಬ್ಯಾಂಕುಗಳು, ತನ್ನದೆಯಾದ ಕೊಡುಗೆ ನೀಡಬಲ್ಲವು. ಅದೇ ರೀತಿ ಅಥಣಿ ತಾಲ್ಲೂಕಿನ ಆರ್ಥಿಕ ಕ್ಷೇತ್ರದಲ್ಲಿ ಹಲವಾರು ಬ್ಯಾಂಕಗಳು ವಿಶೇಷವಾಗಿ ಗುರುತಿಸಿಕೊಂಡಿವೆ. ಅವುಗಳನ್ನು ಕೋಷ್ಟಕ ೩.೭ ರಲ್ಲಿ ಕಾಣಬಹುದು.

**ಕೋಷ್ಟಕ ೩. ೭**

**ಬ್ಯಾಂಕಗಳು ಮತ್ತು ಸಹಕಾರ ಸಂಘಗಳು**

| ವಾಣಿಜ್ಯ ಬ್ಯಾಂಕಗಳು | ಗ್ರಾಮೀಣ ಬ್ಯಾಂಕಗಳು | ಅರ್ಬನ ಕೋ-ಆಪ್ ಸಹಕಾರಿ.ಬ್ಯಾಂಕ್ | ನಗರ ಪ್ರದೇಶದ ಪತ್ತಿನ ಸಹಕಾರಿ ಸಂಘ | ಪ್ರಾಥಮಿಕ ಭೂ.ಅಭಿವೃದ್ಧಿ ಬ್ಯಾಂಕ್ | ವ್ಯವಸಾಯ ಸೇವಾ ಸಹಕಾರಿ ಸಂಸ್ಥೆ | ಹಾಲು ಉತ್ಪಾದಕರ ಸಹಕಾರಿ ಸಂಘಗಳು | ಇತರೆ ಸಹಕಾರಿ ಸಂಘಗಳು |
|---|---|---|---|---|---|---|---|
| ೨೪ | ೧೩ | ೪ | ೭೪ | ೧ | ೬೯ | ೨೨ | ೨೧೬ |

ಆಕರ : ಲೀಡ್ ಡಿಸ್ಟ್ರಿಕ್ಟ ಮ್ಯನೇಜರ್ ಸಿಂಡಿಕೇಡ್ ಬ್ಯಾಂಕ ಬೆಳಗಾವಿ. ೨೦೦೬–೦೭.

ಬ್ಯಾಂಕನ್ನು ಹೊರತು ಪಡಿಸಿದರೆ ತಾಲ್ಲೂಕಿನ ಅಭಿವೃದ್ಧಿಯಲ್ಲಿ ವಿದ್ಯುತ್ ಪ್ರಮುಖ ಪಾತ್ರ ವಹಿಸಬಲ್ಲದು. ಅಥಣಿ ತಾಲ್ಲೂಕಿನ ಬಹುತೇಕ ಹಳ್ಳಿಗಳು ವಿದ್ಯುತ್ ಸೌಲಭ್ಯವನ್ನು ಹೊಂದಿವೆ. ಅಂದರೆ ವಿದ್ಯುತ್ ಸಮಸ್ಯೆ ಅಭಿವೃದ್ಧಿಗೆ ದೊಡ್ಡ ತೊಡಕಾಗಿದೆ. ಅಥಣಿ ಪಟ್ಟಣದಲ್ಲಿ ೧೧೦ ಕೆವಿ .ಸಾಮರ್ಥ್ಯದ ಒಂದು ವಿದ್ಯುತ್ ವಿತರಣಾ ಕೇಂದ್ರವಿದ್ದು , ಅಲ್ಲದೇ ಸತ್ತಿ ರೋಡನಲ್ಲಿ ೨೨೦ ಕೆವಿ ಸಾಮರ್ಥ್ಯದ ದೊಡ್ಡ ವಿದ್ಯುತ್ ವಿತರಣಾ ಕೇಂದ್ರದ ಕೆಲಸ ಪ್ರಗತಿಯಲ್ಲಿದೆ. ಗ್ರಾಮೀಣ ಭಾಗದ ಐಗಳಿ, ಸತ್ತಿ, ಬಳ್ಳಿಗೇರಿಯಲ್ಲಿ ೧೧೦ ಕೆವಿ .ಸಾಮರ್ಥ್ಯದ ಹಾಗೂ ಜಂಬಗಿ, ಸತ್ತಿ, ಐಗಳಿ, ನಂದಗಾಂವ, ಶಿರಹಟ್ಟಿ, ಗಳಲ್ಲಿ ೩೩ ಕೆವಿ .ಸಾಮರ್ಥ್ಯದ ವಿದ್ಯುತ್ ವಿತರಣಾ ಕೇಂದ್ರಗಳಿದ್ದು , ಮುರಗುಂಡಿ ಮತ್ತು ತೆಲಸಂಗದಲ್ಲಿ ೩೩ ಕೆವಿ.ಸಾಮರ್ಥ್ಯದ ಸ್ಟೇಷನಗಳ ಕಾರ್ಯಕ್ಕೆ ಚಾಲನೆ ಸಿಕ್ಕಿದೆ. ತಾಲ್ಲೂಕಿನ ವಿದ್ಯುಚ್ಛಕ್ತಿ ವ್ಯವಸ್ಥೆಯ ಪಕ್ಷಿನೋಟವನ್ನು ಕೋಷ್ಟಕ ೩.೮ ರಲ್ಲಿ ಕಾಣಬಹುದು.

**ಕೋಷ್ಟಕ ೩.೮**

**ಅಥಣಿ ತಾಲ್ಲೂಕಿನ ವಿದ್ಯುತ್ ವಿತರಣಾ ವ್ಯವಸ್ಥೆ (ಯುನಿಟ್‌ಗಳಲ್ಲಿ ಮತ್ತು ಕೋ. ರೂ ಗಳು)**

| ವಿದ್ಯುತ್ ಬಳಕೆದಾರರು | | | | | ವಿದ್ಯುತ್‌ಶ್ಚಕ್ತಿ ಬಳಕೆ(ಯುನಿಟ್ ಲಕ್ಷಗಳಲ್ಲಿ) | | | | | | ಬಂದ ಆದಾಯ |
|---|---|---|---|---|---|---|---|---|---|---|---|
| ಗೃಹ ಬಳಕೆ | ಕೈಗಾರಿಕೆ ಬಳಕೆ | ವಾಣಿಜ್ಯ ಬಳಕೆ | ನೀರಾವರಿ | ದೀಪ ಗಳು | ಗೃಹ ಬಳಕೆ | ಕೈಗಾರಿಕೆ ಬಳಕೆ | ವಾಣಿಜ್ಯ ಬಳಕೆ | ನೀರಾವರಿ | ದೀಪಗಳು | ಇತರೆ | ಒಟ್ಟು |
| ೬೯೮೩೯ | ೧೮೩೨ | ೫೦೩೯ | ೩೧೭೪೦ | ೧೫೯ | ೧೭೬.೬೫೦ | ೩೩.೫೪೦ | ೨೨.೮೦೦ | ೩೮೯.೧೫೦ | ೭೨೦೦೧ | ೬೯೪.೧೫ | ೧೧೨೫.೪೧ |

ಆಕರ : ಹೆಸ್ಕಾಂ ಅಥಣಿ

## ೩.೧೪ ಜನಸಂಖ್ಯೆ

೨೦೦೧ ರ ಜನಗಣತಿಯ ಪ್ರಕಾರ ಅಥಣಿ ತಾಲ್ಲೂಕಿನ ಒಟ್ಟು ಜನಸಂಖ್ಯೆ ೪೬೧೮೬೨ ಇದ್ದು, ಅದರಲ್ಲಿ ೨೩೬೮೭೮ ಪುರುಷರು ಮತ್ತು ೨೨೪೯೮೪ ಮಹಿಳೆಯರು ಇದ್ದಾರೆ. ತಾಲ್ಲೂಕಿನ ಜನಸಂಖ್ಯೆ ವಿವರವನ್ನು ಕೊಷ್ಟಕ ೩.೯ ರಲ್ಲಿ ಕಾಣಬಹುದು..

### ಕೋಷ್ಟಕ ೩.೯
### ಜನಸಂಖ್ಯೆ ವಿವರ

| ಕ್ರ ಸಂ | ವಿವರ | ಕರ್ನಾಟಕ | ಬೆಳಗಾವಿ | ಅಥಣಿ |
|---|---|---|---|---|
| ೦೧ | ಒಟ್ಟು<br>ಪುರುಷರು<br>ಮಹಿಳೆಯರು | ೫೨೮೫೦೫೬೨<br>೨೬೮೯೮೯೧೮<br>೨೫೯೫೧೬೪೪ | ೪.೨೧೪.೫೦<br>೫<br>೨.೧೫೦೦೯೦<br>೨೦೬೪೪೧೫ | ೪೬೧೮೬೨<br>೨೩೬೮೭೮<br>೨೨೪೯೮೪ |
| ೦೨ | ಗ್ರಾಮೀಣ ಒಟ್ಟು<br>ಪುರುಷರು<br>ಮಹಿಳೆಯರು | ೩೪೮೮೯೬೩೩<br>೧೭೬೪೮೯೫೮<br>೧೭೨೪೦೭೦೫ | ೩೨೦೮೧೩<br>೧೬೩೦೭೫೫<br>೧೫೭೧೦೫೮ | ೪೨೦೯೧೨<br>೨೧೬೦೬೧<br>೨೦೪೮೫೧ |
| ೦೩ | ನಗರ ಒಟ್ಟು<br>ಪುರುಷರು<br>ಮಹಿಳೆಯರು | ೧೭೯೬೧೫೨೯<br>೯೨೪೯೯೬೦<br>೮೭೧೧೫೬೯ | ೧೦೭೨೬೯೧<br>೫೧೯೩೩೪<br>೪೯೩೩೫೭ | ೪೦.೯೫೦<br>೨೦.೮೧೭<br>೨೦.೧೩೩ |

೨೦೦೧ ರ ಅಂಕಿ-ಅಂಶಗಳ ನೋಟ

## ೩.೧೫ ಸಾಕ್ಷರತೆ

ಅಕ್ಷರ ಜ್ಞಾನ ಅಭಿವೃದ್ಧಿಗೆ ಪ್ರಮುಖ ಕಾರಣವಾಗಬಲ್ಲದು. ಅದರಂತೆ ೨೦೦೧ ಜನಗಣತಿಯ ಪ್ರಕಾರ ಅಥಣಿ ತಾಲ್ಲೂಕಿನ ಒಟ್ಟು ೪೬೧೮೬೨ ಜನಸಂಖ್ಯೆಯಲ್ಲಿ ೭೨.೫೪ ಪುರುಷರ ಸಾಕ್ಷರತಾ ಪ್ರಮಾಣವಿದ್ದರೆ, ೪೯.೭೪ ರಷ್ಟು ಮಹಿಳೆಯರ ಸಾಕ್ಷರತಾ ಪ್ರಮಾಣವಿದೆ. ೨೦೦೪-೦೫ ಸಾಲಿನ ಪ್ರಸ್ತುತ ತಾಲ್ಲೂಕಿನಲ್ಲಿ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮವನ್ನು ವ್ಯಾಪಕವಾಗಿ ಹಮ್ಮಿಕೊಳ್ಳಲಾಗಿದೆ. ಅದನ್ನು ಕೋಷ್ಟಕ ೩.೧೦ ಮತ್ತು ೩.೧೧ ರಲ್ಲಿ ಕಾಣಬಹುದು.

### ಕೋಷ್ಟಕ ೩.೧೦
### ಮುಂದುವರಿಕೆ ಶಿಕ್ಷಣ ಕೇಂದ್ರಗಳು

| ಕ್ರ. ಸಂ | ವಿಧಾನಸಭಾ ಕ್ಷೇತ್ರ | ನೋಡಲ್ ಮುಂದುವರಿದ ಶಿಕ್ಷಣ ಕೇಂದ್ರ | ಮುದುವರಿಕೆ ಶಿಕ್ಷಣ ಕೇಂದ್ರ | ಒಟ್ಟು |
|---|---|---|---|---|
| ೦೧ | ಅಥಣಿ | ೦೯ | ೯೧ | ೧೦೦ |
| ೦೨ | ಕಾಗವಾಡ | ೦೭ | ೭೦ | ೭೭ |
| | ಒಟ್ಟು | ೧೬ | ೧೬೧ | ೧೭೭ |

### ಕೋಷ್ಟಕ ೩.೧೧

### ತಾಲ್ಲೂಕಿನ ಸಾಕ್ಷರತಾ ವಿವರಣೆ

| ಗ್ರಾಮೀಣ | | | ನಗರ | | | ಒಟ್ಟು | | |
|---|---|---|---|---|---|---|---|---|
| ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ೨೧೨೩೬೩ | ೧೨೯೨೭೮ | ೮೩೦೮೫ | ೨೭೧೪೪ | ೧೫೪೭೧ | ೧೧೬೭೩ | ೨೩೯೫೦೭ | ೧೪೪೭೪೯ | ೯೪೮೦೮ |

ಮೂಲ: ಜನಗಣತಿ ೨೦೦೧ರ ವರದಿ

## ೩.೧೬ ಕಾರ್ಮಿಕರ ಪ್ರಮಾಣ

ಕಾರ್ಮಿಕರ ಪ್ರಮಾಣ ಹೆಚ್ಚಿದಷ್ಟು ಉತ್ಪಾದನೆ ಮತ್ತು ಉದ್ಯೋಗದಲ್ಲಿ ಹೆಚ್ಚಳವಾಗಿ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳು ಲಭ್ಯವಾಗಬಲ್ಲವು. ಅಥಣಿ ತಾಲ್ಲೂಕಿನಲ್ಲಿ ಕೃಷ್ಣ, ರೇಣುಕಾ, ಕೆಂಪವಾಡ, ಉಗಾರ ಸಕ್ಕರೆ ಕಾರ್ಖಾನೆಗಳಿದ್ದು, ಬಹುತೇಕ ಕಾರ್ಮಿಕರಿಗೆ ಜೀವನವನ್ನು ನೀಡಿವೆ. ಅಲ್ಲದೆ ಅಥಣಿಯ ಪರಿಶಿಷ್ಟ ವರ್ಗದವರು ಚರ್ಮೋದ್ಯೋಗವನ್ನು ಆಶ್ರಯಿಸಿ ಬದುಕುತ್ತಿದ್ದಾರೆ. ಇದು ಅವರಿಗೆ ಅಗತ್ಯ ಉದ್ಯೋಗವೂ ಆಗಿದೆ. ಇದರ ಜೊತೆಗೆ ಅಥಣಿ ತಾಲ್ಲೂಕಿನಲ್ಲಿ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕ ವರ್ಗದವರ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕ ೩.೧೨ ರಲ್ಲಿ ವಿಂಗಡಿಸಲಾಗಿದೆ. ಅದೇ ರೀತಿ ಕಾರ್ಮಿಕರ ವರ್ಗೀಕರಣವನ್ನು ಕೋಷ್ಠಕ ೩.೧೩ ರಲ್ಲಿ ಕಾಣಬಹುದು.

### ಕೋಷ್ಟಕ ೩.೧೨
ಕಾರ್ಮಿಕರ ವಿವರ

| ಅ ಸಂ | ವಿವರ | | ಕರ್ನಾಟಕ | ಬೆಳಗಾವಿ | ಅಥಣಿ |
|---|---|---|---|---|---|
| ೦೧ | ಪ್ರಮುಖ ಕಾರ್ಮಿಕರು | ಒಟ್ಟು | ೩೬.೬ | ೩೬.೫ | ೩೮.೪ |
| | | ಪುರುಷರು | ೩೧.೭ | ೫೨.೦ | ೫೩.೭ |
| | | ಮಹಿಳೆಯರು | ೨೧.೧ | ೨೦.೪ | ೨೨.೦೨ |
| ೦೨ | ಅಂತಿಮ ವರ್ಗದ ಕಾರ್ಮಿಕರು | ಒಟ್ಟು | ೭.೯ | ೮.೧ | ೧೩.೦ |
| | | ಪುರುಷರು | ೫.೦ | ೩.೯ | ೫.೫ |
| | | ಮಹಿಳೆಯರು | ೧೦.೯ | ೧೨.೪ | ೨೦.೯ |
| ೦೩ | ಇತರೆ ಕೆಲಸಗಾರರು | ಒಟ್ಟು | ೫೫.೫ | ೪೪.೧ | ೪೦.೮ |
| | | ಪುರುಷರು | ೪೩.೪ | ೪೪.೧ | ೪೦.೮ |
| | | ಮಹಿಳೆಯರು | ೧೦.೯ | ೧೨.೪ | ೨೦.೦೯ |
| ೦೪ | ಕೃಷಿಕರು | ಒಟ್ಟು | ೫೫.೫ | ೪೮.೬ | ೪೪.೧ |
| | ೪.೧ ಕೃಷಿ ಕಾರ್ಮಿಕರು | ಒಟ್ಟು | ೨೬.೫ | ೩೧.೩ | ೩೫.೩ |
| | ೪.೨ ಗೃಹ ಕೈಗಾರಿಕೆಗಳು | | ೪.೧ | ೩.೫ | ೨.೦ |
| | ೪.೩ ಇತರೆ | | ೪೦.೦೨ | ೨೭.೬ | ೧೫.೭ |

ಆಕರ :ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೧

**ಕೋಷ್ಟಕ ೩.೧೩**
**ಅಥಣಿ ತಾಲ್ಲೂಕಿನ ಕಾರ್ಮಿಕರ ವರ್ಗೀಕರಣ**

| ಕೆಲಸಗಾರರು | | ಕೆಲಸ ಗಾರರಲ್ಲದ ವರು | ಕೃಷಿ ಸಾಗುವಳಿದಾರರು | | | ಕೃಷಿ ಕಾರ್ಮಿಕರು | | | ಗೃಹ ಕೃತ್ಯ ಚಟುವಟಿಕೆಗಳು | | |
|---|---|---|---|---|---|---|---|---|---|---|---|
| ಮುಖ್ಯ | ಅರೆಕಾಲಿಕ | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೭೭೨೨೪ | ೫೯೯೪೬ | ೨೨೪೬೯೨ | ೭೨೧೧೬ | ೩೯೫೩೯ | ೧೧೧೬೫೫ | ೩೫೮೪೬ | ೪೭೮೧೫ | ೮೩೬೬೧ | ೩೦೩೭ | ೧೬೩೦ | ೪೬೬೭ |

| ಇತರ ಸೇವೆಗಳು | | | ಒಟ್ಟು ಕೆಲಸಗಾರರು | | |
|---|---|---|---|---|---|
| ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೯೨೩ | ೭೯೫೪ | ೩೭೧೮೭ | ೧೪೦೨೩೨ | ೯೬೯೩೮ | ೨೩೭೧೭೦ |

ಮೂಲ : ಜನಗಣತಿ ೨೦೦೧ ರ ವರದಿ

## ೩.೧೭ ಆರೋಗ್ಯ

ಆರೋಗ್ಯವೇ ಭಾಗ್ಯ. ಸಾರ್ವಜನಿಕರು ಆರೋಗ್ಯದಿಂದ ಇದ್ದಾಗ ಮಾತ್ರ ಸಮಾಜದ ಅಭಿವೃದ್ಧಿ ಸಾಧ್ಯ. ಸ್ವಾತಂತ್ರ್ಯ ನಂತರ ಸರಕಾರವು ಹಲವಾರು ಆರೋಗ್ಯ ಕಾರ್ಯಕ್ರಮಗಳ ಮೂಲಕ ಸಾರ್ವಜನಿಕರಿಗೆ ಸೇವೆ ಸಲ್ಲಿಸುತ್ತಿದೆ. ಅಥಣಿ ತಾಲ್ಲೂಕಿನಲ್ಲಿ ಒಂದು ಮೇಲ್ದರ್ಜೆ ಆಸ್ಪತ್ರೆ ಇದ್ದು, ಅನೇಕ ಪ್ರಾಥಮಿಕ ಆರೋಗ್ಯ ಕ್ಷೇಂದ್ರಗಳ ಮೂಲಕ ಆರೋಗ್ಯ ಸೇವೆಯಲ್ಲಿ ನಿರತವಾಗಿದೆ. ಅವುಗಳ ವಿವರಣೆ ಈ ಕೆಳಗಿನ ಕೋಷ್ಟಕ ೩.೧೪ ರಲ್ಲಿ ಕಾಣಬಹುದು.

**ಕೋಷ್ಟಕ ೩.೧೪**
**ಅಥಣಿ ತಾಲ್ಲೂಕಿನ ಆರೋಗ್ಯ ಕ್ಷೇತ್ರದ ವಿವರ**

| ಅಲೋಪತಿ ಆಸ್ಪತ್ರೆಗಳು | | ಭಾರತೀಯ ವೈದ್ಯ ಪದ್ಧತಿಯ ಆಸ್ಪತ್ರೆಗಳು | | ಖಾಸಗಿ ಆಸ್ಪತ್ರೆಗಳು | | ಪ್ರಾಥಮಿಕ ಆರೋಗ್ಯ ಕೇಂದ್ರಗಳು | |
|---|---|---|---|---|---|---|---|
| ಸಂಖ್ಯೆ | ಹಾಸಿಗೆಗಳು | ಸಂಖ್ಯೆ | ಹಾಸಿಗೆಗಳು | ಸಂಖ್ಯೆ | ಹಾಸಿಗೆಗಳು | ಸಂಖ್ಯೆ | ಹಾಸಿಗೆಗಳು |
| ೧೮ | ೧೫೮ | ೦೧ | ೦೬ | ೩೦ | ೧೫೦ | ೧೫ | ೯೦ |

| ಸಮುದಾಯ ಆರೋಗ್ಯ ಕೇಂದ್ರಗಳು | | ಚಿಕಿತ್ಸಾಲಯಗಳು | | ಕುಟುಂಬ ಕಲ್ಯಾಣ | | | | |
|---|---|---|---|---|---|---|---|---|
| ಸಂಖ್ಯೆ | ಹಾಸಿಗೆಗಳು | ಸಂಖ್ಯೆ | ಹಾಸಿಗೆಗಳು | ಕೇಂದ್ರ | ಉಪ ಕೇಂದ್ರಗಳು | ವೆಸೆಕ್ಟ್ ಮಿ | ಟ್ಯುಜಿಕ್ಟಮಿ | ಔಷಧ ಅಂಗಡಿಗಳು |
| ೧ | ೫೦ | ೦ | ೦ | ೦ | ೭೧ | ೨೨ | ೪೭೩೯ | ೧೨೮ |

ಮೂಲ: ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಬೆಳಗಾವಿ. ೨೦೦೬-೦೭

## ೩.೧೮ ಭೂಮಿಯ ಉಪಯೋಗ

ಅಥಣಿ ತಾಲ್ಲೂಕಿನ ಭೌಗೋಳಿಕ ಕ್ಷೇತ್ರ ೧೯೯೫೧೩ ಹೆಕ್ಟೇರಿದೆ. ಇದರಲ್ಲಿ ೩೧೭೧ ಹೇಕ್ಟರ್ ಭೂಮಿ ಸಾಗುವಳಿಗೆ ಯೋಗ್ಯವಾದ ಭೂಮಿಯಾಗಿದ್ದು, ೨೧೩೪ ಹೆಕ್ಟರ್ ಭೂಮಿ ಖಾಯಂ ಗೋಮಾಳವಾಗಿದೆ ಹಾಗೂ ೧೨೯ ಹೇಕ್ಟರ್ ಭೂಮಿ ಗಿಡಗಳು, ಬನಗಳಿಂದ ಆವೃತ್ತವಾಗಿವೆ, ಅಲ್ಲದೆ ೫೮೮೧ ಹೆಕ್ಟರ ಭೂಮಿ ಅರಣ್ಯ, ೬೪೬೮ ಹೆಕ್ಟರ್ ಭೂಮಿ ವ್ಯವಸಾಯೇತರ, ೪೩೬೪ ಹೆಕ್ಟರ್ ಭೂಮಿ ಬಂಜರು ಆಗಿದ್ದು, ೩೧೦೧೯ ಹೆಕ್ಟರ್ ಭೂಮಿ ಚಾಲು ಮತ್ತು ೧೦೭೪ ಹೆಕ್ಟರ್ ಭೂಮಿ ಇತರೆ ಚಾಲು ಭೂಮಿಯಾಗಿದೆ. ತಾಲ್ಲೂಕಿನ ಭೂಮಿಯಲ್ಲಿ ೨೧೫೮೧೩ ಹೆಕ್ಟರ್ ಭೂಮಿ ಬಿತ್ತನೆಗೆ ಯೋಗ್ಯವಾಗಿದೆ. ಅದರಂತೆ ಭೂಮಿಯ ಉಪಯೋಗ ಮತ್ತು ಭೂಮಿಯ ಬಳಕೆಯ ವಿವರವನ್ನು ಕೋಷ್ಟಕ ೩.೧೫ ಮತ್ತು ಕೋಷ್ಟಕ ೩.೧೫(ಎ) ರಲ್ಲಿ ನೀಡಲಾಗಿದೆ

**ಕೋಷ್ಟಕ ೩.೧೫**
**ಭೂಮಿಯ ಉಪಯೋಗ**

| ಭೌಗೋಳಿಕ ವಿಸ್ತೀರ್ಣ | ಅರಣ್ಯ | ಸಾಗುವಳಿಕೆ ಲಭ್ಯವಿಲ್ಲದಿರುವ ಭೂಮಿ | | | ಸಾಗುವಳಿ ಮಾಡದಿರುವ ಇತರೆ ಭೂಮಿ | | | |
|---|---|---|---|---|---|---|---|---|
| | | ವ್ಯವಸಾಯೇತರ | ಬಂಜರು | ಒಟ್ಟು | ಸಾಗುವಳಿಗೆ ಯೋಗ್ಯವಾದ ಬಂಜರು | ಕಾಯಂ ಗೋಮಾಳ | ವೃಕ್ಷ ಮತ್ತು ತೋಟಗಳು | ಒಟ್ಟು |
| ೧೯೯೫೧೩ | ೫೮೮೧ | ೬೪೬೮ | ೪೩೬೪ | ೧೧೪೧೩ | ೩೧೭೧ | ೨೧೩೪ | ೧೨೯ | ೫೪೩೪ |

**ಕೋಷ್ಟಕ ೩.೧೫ (ಎ)**
**ಭೂಮಿಯ ಬಳಕೆ**

| ಚಾಲು ಭೂಮಿ | | | ಬಿತ್ತನೆಯಾದ ಭೂಮಿ | | |
|---|---|---|---|---|---|
| ಚಾಲ್ತಿ | ಇತರೆ | ಒಟ್ಟು | ನಿವ್ವಳ | ಒಂದಕ್ಕಿಂತ ಹೆಚ್ಚು | ಒಟ್ಟು |
| ೩೧೦೧೯ | ೧೦೭೪ | ೩೨೦೯೩ | ೧೫೦೫೭೩ | ೬೫೨೪೦ | ೨೧೫೮೧೩ |

ಮೂಲ : ಜಿಲ್ಲಾ ಕೃಷಿ ಇಲಾಖೆ ಬೆಳಗಾವಿ. ೨೦೦೬-೦೭

## ೩.೧೯ ಭೂ ಹಿಡುವಳಿದಾರರು

ಕೋಷ್ಟಕ ೩.೧೫ ರಲ್ಲಿ ತಿಳಿಸಿರುವಂತೆ ತಾಲ್ಲೂಕಿನಲ್ಲಿ ಒಟ್ಟು ೧ ಹೆಕ್ಟರ್‌ಗಿಂತ ಕಡಿಮೆ ಭೂಮಿ ಹೊಂದಿರುವ ಭೂ ಹಿಡುವಳಿದಾರರು ೧೬೫೮೬ ಇದ್ದು ಅವರು ಹೊಂದಿದ ಭೂಮಿ ೮೨೨೫ ಹೆಕ್ಟರ ಇದೆ. ೧-೨ ಹೆಕ್ಟರ ಭೂಮಿ ಹೊಂದಿದ ಹಿಡುವಳಿದಾರರ ೨೦೦೭ ಜನ ಇದ್ದು, ೨೮೮೫೪ ಹೆಕ್ಟರ್ ಭೂಮಿ ಹೊಂದಿರುತ್ತಾರೆ. ೨-೪ ಹೆಕ್ಟರ ಭೂಮಿ ಹೊಂದಿರುವ ಹಿಡುವಳಿದಾರರು ೧೮೫೯೬ ಇದ್ದು, ಅವರು ಹೊಂದಿದ ಭೂಮಿ ೫೦೯೦೦ ಹೆಕ್ಟರ್ ಇರುತ್ತದೆ. ೪-೧೦ ಹೆಕ್ಟರ ಭೂಮಿ ಹೊಂದಿರುವ ಹಿಡುವಳಿದಾರರು ೧೧೩೫೦ ಇದ್ದು, ೬೭೩೩೪ ಹೆಕ್ಟರ ಭೂಮಿ ಹೊಂದಿರುತ್ತದೆ ಹಾಗೂ ಹತ್ತು ಹೆಕ್ಟರ ಭೂಮಿ ಹೊಂದಿರುವ ದೊಡ್ಡ ಹಿಡುವಳಿದಾರರು ೧೯೦೦ ಜನರು ಇದ್ದು, ೨೭೫೬೭ ಹೆಕ್ಟರ ಭೂಮಿ ಹೊಂದಿರುತ್ತಾರೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ೭೨೧೧೬ ಜನ ಗಂಡಸರು ಮತ್ತು ೩೯೫೩೯ ಜನ ಹೆಂಗಸರು ಇದ್ದು ಒಟ್ಟು ೬೮೪೩೯ ಜನ ಹಿಡುವಳಿದಾರರು ಕೃಷಿಯಲ್ಲಿ ತಾಲ್ಲೂಕಿನಲ್ಲಿ ೩೫೮೪೬ ಜನ ಗಂಡಸರು ಮತ್ತು ೪೭೮೧೫ ಹೆಂಗಸರು, ಒಟ್ಟು ೮೩೬೬೧ ಜನರು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಭೂ ಹಿಡುವಳಿಗಳು ಮತ್ತು ವಿಸ್ತೀರ್ಣದ ವಿವರವನ್ನು ಕೋಷ್ಟಕ ೩.೧೬ ರಲ್ಲಿ ನೀಡಲಾಗಿವೆ

**ಕೋಷ್ಟಕ ೩.೧೬**

**ಭೂ ಹಿಡುವಳಿಗಳು ಮತ್ತು ವಿಸ್ತೀರ್ಣ**

| ಅತಿ ಸಣ್ಣ | | ಸಣ್ಣ | | ಅರೆ ಮಧ್ಯಮ(೨-೪) | | ಮಧ್ಯಮ (೪-೧೦) | | ದೊಡ್ಡ | | ಒಟ್ಟು | |
|---|---|---|---|---|---|---|---|---|---|---|---|
| ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧೬೫೮೬ | ೮೨೨೫ | ೨೦೦೦೭ | ೨೮೮೫೪ | ೧೮೫೯೬ | ೫೦೯೦೦ | ೧೧೩೫೦ | ೬೭೩೩೪ | ೧೯೦೦ | ೨೭೫೬೭ | ೬೮೪೩೯ | ೧೮೨೮೮೦ |

ಮೂಲ : ಜಿಲ್ಲಾ ಸಂಖ್ಯಾ ಸಂಗ್ರಹ ಕಛೇರಿ ಬೆಳಗಾವಿ.೨೦೦೬-೨೦೦೭

## ೩.೨೦ ಕೈಗಾರಿಕೆ

ಕೃಷ್ಣಾ ನದಿ ತೀರದಲ್ಲಿ ನೀರಾವರಿ ಪ್ರದೇಶಗಳನ್ನೇ ಹೆಚ್ಚಾಗಿ ಹೊಂದಿರುವ ಅಥಣಿ ತಾಲ್ಲೂಕು ಕಬ್ಬಿನ ಬೆಳೆಗೆ ಪ್ರಸಿದ್ಧಿ ಪಡೆದಿದೆ. ಮುಖ್ಯವಾಗಿ ತಾಲ್ಲೂಕಿನಲ್ಲಿ ಒಂದು ಸಹಕಾರಿ ಮತ್ತು ೩ ಖಾಸಗಿ ಸೇರಿದಂತೆ ಒಟ್ಟು ೪ ಬೃಹತ್ ಸಕ್ಕರೆ ಕೈಗಾರಿಕೆಗಳು ಸ್ಥಾಪಿತಗೊಂಡಿವೆ. ಸಕ್ಕರೆ ಉದ್ಯಮದೊಂದಿಗೆ ವಿದ್ಯುತ್ ಡಿಸ್ಟಿಲರಿ

ಇತ್ಯಾದಿ ಉಪ ಉತ್ಪನ್ನಗಳನ್ನು ಉತ್ಪಾದನೆ ಮಾಡುವುದರ ಮೂಲಕ ಈ ಭಾಗದ ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುತ್ತಿವೆ. ಹಾಗೆಯೇ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವ ಕೊಲ್ಹಾಪೂರಿ ಚಪ್ಪಲಿಗಳು ಅಥಣಿ ತಾಲ್ಲೂಕಿನ ಚರ್ಮೋದ್ಯೋಗಕ್ಕೆ ಉತ್ತಮ ಹೆಸರು ತಂದು ಕೊಟ್ಟಿದೆ. ಮದಭಾವಿ, ಕಾಗವಾಡ, ಸತ್ತಿ, ಅಥಣಿ, ಅನಂತಪೂರ, ಮುಂತಾದ ಕಡೆಗಳಲ್ಲಿ ಚರ್ಮದ ಉದ್ಯಮಗಳು ಸಾಕಷ್ಟು ಪ್ರಸಿದ್ಧಿ ಪಡೆದಿವೆ. ಅವುಗಳ ಜೊತೆಗೆ ಇನ್ನಿತರ ಸಣ್ಣ ಪ್ರಮಾಣದ ಕೈಗಾರಿಕೆಗಳಾದ ಇಂಜಿನಿಯರಿಂಗ್ ಉದ್ದಿಮೆಗಳು ಮತ್ತು ಹಲವಾರು ಸೇವಾ ಕೇಂದ್ರಗಳು, ಅಟೋಮೊಬಾಯಿಲ್ ಉದ್ದಿಮೆಗಳು, ಕಟ್ಟಿಗೆ ಕೊರೆಯುವ ಕೆಲಸದ ಯಂತ್ರಗಳು, ಮಡಕೆ ತಯಾರಿಕೆ, ಇಟ್ಟಿಗೆ ಭಟ್ಟಿ, ಎಣ್ಣೆ ತಯಾರಿಕೆ, ಚುನಮುರಿ ತಯಾರಿಕೆ ಭಟ್ಟಿ ಇತ್ಯಾದಿಗಳು ಜನರಿಗೆ ಉದ್ಯೋಗ ನೀಡುವದರೊಂದಿಗೆ ಕೈಗಾರಿಕಾ ಕ್ಷೇತ್ರದಲ್ಲಿ ಮಹತ್ವವೆನಿಸಿವೆ. ಅವುಗಳ ವಿವರಣೆಯನ್ನು ಕೋಷ್ಟಕ ೩.೧೭, ೩.೧೭(ಎ) ಮತ್ತು ೩.೧೭(ಬಿ)ದಲ್ಲಿ ವಿಂಗಡಿಸಿರುವುದನ್ನು ಕಾಣಬಹುದು.

**ಕೋಷ್ಟಕ ೩.೧೭**

**ಅಥಣಿ ಪರಿಸರದ ಕೈಗಾರಿಕಾ ಪಕ್ಷಿ ನೋಟ**

| ಬಟ್ಟೆ | ರಾಸಾಯನಿಕ | ಇಂಜನಿಯರಿಂಗ್ | ಇತರೆ | ಒಟ್ಟು | ಉದ್ಯೋಗಿಗಳು |
|---|---|---|---|---|---|
| ೧ | ೦ | ೦ | ೭ | ೮ | ೪೮೨೫ |

**ಕೋಷ್ಟಕ ೩.೧೭ (ಎ)**

**ಜಿಲ್ಲಾ ಕೈಗಾರಿಕಾ ಕೇಂದ್ರದಲ್ಲಿ ನೊಂದಾಯಿಸಲ್ಪಟ್ಟ ಸಣ್ಣ ಪ್ರಮಾಣದ ಕೈಗಾರಿಕೆಗಳ ಸಂಖ್ಯೆ**

| ಅಟೋಮೊಬಾಯಿಲ್ಸ |  | ಎಲೆಕ್ಟ್ರಿಕಲ್ ಮತ್ತು ಎಲೆಕ್ಟ್ರಾನಿಕ್ಸ |  | ರಾಸಾಯನಿಕ |  | ಫೆರಸ್ ನಾನ್ ಫೆರಸ್ |  | ಆಹಾರ ಮತ್ತು ಮಾದಕ ವಸ್ತುಗಳು |  |
|---|---|---|---|---|---|---|---|---|---|
| ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು |
| ೬ | ೪೫ | ೩೨ | ೯೫ | ೫ | ೪೨ | ೦ | ೦ | ೧೭೬ | ೧೬೩೫ |
| ಗ್ಲಾಸ್ ಮತ್ತು ಸೆರಾಮಿಕ್ಸ |  | ಇಂಜಿಯರ್ ವರ್ಕ್ಸ ಮತ್ತು ರಿಪೇರಿ |  | ಚರ್ಮ |  | ಮೆಕಾನಿಕಲ್ ಇಂಜನಿಯರ್ |  | ಕಾಗದ ಮತ್ತು ಮುದ್ರಣ |  |
| ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು | ಸಂಖ್ಯೆ | ಕಾರ್ಮಿಕರು |
| ೧೩೦ | ೬೩೫ | ೮೫ | ೯೫೦ | ೫೨೫ | ೧೪೧೦ | ೪೦ | ೨೭೦ | ೨೮ | ೨೨೦ |

**ಮೂಲ :** ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ ಬೆಳಗಾವಿ. ೨೦೦೭-೦೮

ಕೋಷ್ಟಕ ೩.೧೭ (ಬಿ)

ಸಕ್ಕರೆ ಕೈಗಾರಿಕೆಗಳ ವಿವರ

| ಕ್ರ.ಸ | ಕೈಗಾರಿಕೆಗಳ ಹೆಸರು | ಸಕ್ಕರೆ ಉತ್ಪಾದನಾ ಸಾಮರ್ಥ್ಯ (ಟಿ.ಸಿ.ಡಿ) | ಸಹ ಉತ್ಪಾದನೆಗಳು | | | ಒಟ್ಟು ಕಾರ್ಮಿಕರ ಸಂಖ್ಯೆ |
|---|---|---|---|---|---|---|
| | | | ವಿದ್ಯುತ್ | ಡಿಸ್ಟಿಲರಿ | ಇತರೆ | |
| ೦೧ | ದಿ.ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಸಂಕೋನಟ್ಟಿ | ೨೫೦೦ | ಉತ್ಪಾದಿಸಲ್ಪಡುವುದು | - | - | ೭೦೦ |
| ೦೨ | ದಿ ಉಗಾರ ಶುಗರ್ ವರ್ಕ್ಸ ಲಿ. ಉಗಾರ ಖುರ್ದ | ೧೦,೦೦೦ | ಉತ್ಪಾದಿಸಲ್ಪಡುವುದು | ಉತ್ಪಾದಿಸುವುದು | - | ೨೦೦೦ |
| ೦೩ | ರೈತರ ಸಕ್ಕರೆ ಕಾರ್ಖಾನೆ ನಿ. ಕೆಂಪವಾಡ | ೨೫೦೦ | - | - | - | ೪೦೦ |
| ೦೪ | ದಿ. ರೇಣುಕಾ ಶುಗರ್ ವರ್ಕ್ಸ ನಿ. ಕೊಕಟನೂರ | ೧೦೦೦೦ | ಉತ್ಪಾದಿಸಲ್ಪಡುವುದು | ಉತ್ಪಾದಿಸಲ್ಪಡುವುದು | ಶುಗರ್ ರಿಫೈನರಿ | ೧೫೦೦ |

ಮೂಲ : ಜಂಟಿ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ ಬೆಳಗಾವಿ. ೨೦೦೬-೦೭.

## ೩.೨೧ ಮಹಿಳಾ ಸಬಲೀಕರಣ ಮತ್ತು ಪಂಚಾಯತ್ ರಾಜ್ ಕಾರ್ಯ ನಿರ್ವಹಣೆ

ಅಥಣಿ ತಾಲ್ಲೂಕಿನಲ್ಲಿ ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆ ಅಸ್ಥಿತ್ವದಲ್ಲಿದೆ. ಕೆಳ ಹಂತದಲ್ಲಿ ಗ್ರಾಮ ಪಂಚಾಯತಿ, ಮಧ್ಯಮ ಹಂತದಲ್ಲಿ ತಾಲ್ಲೂಕಾ ಪಂಚಾಯತಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿಗಳು ಕಾರ್ಯನಿರ್ವಹಿಸುತ್ತಿವೆ. ಪಟ್ಟಣ ಪಂಚಾಯತಿಯಲ್ಲಿ ಪುರಸಭೆ, ನಗರ ಸಭೆ, ಪಟ್ಟಣ ಪಂಚಾಯತಿಗಳು ಬರುತ್ತವೆ. ತಾಲ್ಲೂಕಿನಲ್ಲಿ ಒಟ್ಟು ೫೧ ಗ್ರಾಮ ಪಂಚಾಯತಿ ಕ್ಷೇತ್ರಗಳು, ೪೦ ತಾಲ್ಲೂಕ್ ಪಂಚಾಯತ್ ಕ್ಷೇತ್ರಗಳು, ೧೧ ಜಿಲ್ಲಾ ಪಂಚಾಯತ್ ಕ್ಷೇತ್ರಗಳು ಅಸ್ಥಿತ್ವದಲ್ಲಿವೆ. ಅಥಣಿ ತಾಲ್ಲೂಕಿನ ಪುರಸಭೆಯು ಸಹ ಸ್ವ-ಸಹಾಯ ಸಂಘಗಳನ್ನು .ರಚಿಸಿದೆ. ಅದೇ ರೀತಿ ಗ್ರಾಮ ಪಂಚಾಯತಿಗಳು ಗ್ರಾಮಗಳಲ್ಲಿನ ಸ್ವ-ಸಹಾಯ ಸಂಘಗಳಿಗೆ ನೈತಿಕ ಬೆಂಬಲವನ್ನು ನೀಡಬೇಕು ಮತ್ತು ಸ್ವ-ಸಹಾಯ ಸಂಘಗಳಿಗೆ ಸರ್ಕಾರದಿಂದ ಸಿಗುವ ನೆರವನ್ನು ಒದಗಿಸಿಕೊಡುವ ಪ್ರಯತ್ನಗಳನ್ನು ಮಾಡಬೇಕು. ಆದರೆ ಯಾವ ಗ್ರಾಮ ಪಂಚಾಯತಿಗಳೂ ಸಹ ಇಂತಹ ಪ್ರಯತ್ನಗಳನ್ನು ಮಾಡುತ್ತಿಲ್ಲ.

### ೩.೨೨ ಸ್ವ-ಸಹಾಯ ಸಂಘಗಳು

ಸ್ವ-ಸಹಾಯ ಸಂಘಗಳು ಅಭಿವೃದ್ಧಿಯ ಸಂಕೇತಗಳು. ಸ್ವ-ಸಹಾಯ ಸಂಘಗಳ ಮೂಲಕ ಬಡತನ, ನಿರುದ್ಯೋಗ, ಮೊದಲಾದ ಸಮಸ್ಯೆಗಳನ್ನು ಸುಲಭವಾಗಿ ನಿವಾರಿಸಬಹುದು. ಇದರಿಂದ ರಾಷ್ಟ್ರದ ಯೋಜನಾ ವೆಚ್ಚವು ಕಡಿಮೆಯಾಗುವುದು. ಬೆಳಗಾವಿ ಜಿಲ್ಲೆಯಲ್ಲಿ ೧೬,೫೮೫ ಸ್ವ-ಸಹಾಯ ಸಂಘಗಳಿವೆ. ಈ ಸ್ವ-ಸಹಾಯ ಸಂಘಗಳಿಂದ ೧೪ ಕೋಟಿ ೩೦ ಲಕ್ಷ ಹಣ ಉಳಿತಾಯವಾಗಿದೆ. ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನಿಂದ ೭೯೨ ಸ್ವ-ಸಹಾಯ ಸಂಘಗಳಿಗೆ ೧೦ ಕೋಟಿ ೯೮ ಲಕ್ಷ ರೂ ಸಾಲ ನೀಡಲಾಗಿದೆ.

ಅಥಣಿ ತಾಲ್ಲೂಕಿನಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆ ವತಿಯಿಂದ ಗ್ರಾಮೀಣ ಪ್ರದೇಶದಲ್ಲಿ ೧೪೪೮, ನಗರ ಪ್ರದೇಶದಲ್ಲಿ ೫೧ ಸಂಘಗಳು ರಚಿತವಾಗಿವೆ. ಒಟ್ಟು ೨೩,೪೦೫ ಸದಸ್ಯರನ್ನು ಈ ಸಂಘಗಳು ಒಳಗೊಂಡಿವೆ. ಒಟ್ಟು ಸದಸ್ಯರಲ್ಲಿ ೩೬೫೩ ಸದಸ್ಯರು ಪರಿಶಿಷ್ಟ ಜಾತಿಯಾಗಿದ್ದರೆ, ೧೭೧೦ ಪರಿಶಿಷ್ಠ ಪಂಗಡದವರಾಗಿದ್ದಾರೆ. ಓ.ಬಿ.ಸಿ ವರ್ಗದವರು 3913 ಇದ್ದರೆ, ಇತರೆ ೧೪೨೯ ರಷ್ಟಿದ್ದಾರೆ. ಒಟ್ಟು ೩ ಲಕ್ಷ ೫೨ ಸಾವಿರ ರೂ.ಗಳನ್ನು ಉಳಿತಾಯ ಮಾಡಿವೆ. ೪ ರಿಂದ ೫ ಲಕ್ಷ ಸಾಲವನ್ನು ಪಡಿದುಕೊಂಡಿವೆ. ಅದೇ ರೀತಿ ವಿಮೋಚನ ಸ್ವಯಂ ಸೇವಾ ಸಂಸ್ಥೆ ಯಿಂದ ೫೦, ರುಪದಿ ಸ್ವಯಂ ಸೇವಾ ಸಂಸ್ಥೆಯಿಂದ ೧೭೦, ವಿಶ್ವೇಶ್ವರಯ್ಯ ಸ್ವಯಂ ಸೇವಾ ಸಂಸ್ಥೆಯಿಂದ ೬೭, ಕರ್ಡ ಸ್ವಯಂ ಸೇವಾ ಸಂಸ್ಥೆಯಿಂದ ೪೦ ಸ್ವ-ಸಹಾಯ ಸಂಘಗಳು ರಚನೆಯಾಗಿವೆ. ಡಿ.ಸಿ.ಸಿ ಬ್ಯಾಂಕ್ ೨೧ ಸಂಘಗಳನ್ನು, ಮಲಪ್ರಭಾ ಬ್ಯಾಂಕ್ ೨೦ ಸಂಘಗಳನ್ನು ರಚಿಸಿವೆ. ಈ ಸಂಘಗಳು ಒಟ್ಟು ೨,೫೦,೦೦೦ ಸಾವಿರ ಉಳಿತಾಯವನ್ನು ಮಾಡಿವೆ. ಒಟ್ಟು ೩.೩೨,೦೦೦ ಸಾವಿರ ಸಾಲವನ್ನು ಹೈನುಗಾರಿಕೆಗೆ ನೀಡಿದೆ. ಮೇಲಿನ ಸ್ವಯಂ ಸೇವಾ ಸಂಸ್ಥೆಗಳು ಸ್ವರ್ಣ ಜಯಂತಿ ಸ್ವ ರೋಜ್‌ಗಾರ್ ಯೋಜನೆಯಿಂದ ಸಂಘಗಳನ್ನು ರಚಿಸಿವೆ. ಅಲ್ಲದೆ ಬ್ಯಾಂಕುಗಳು ಮತ್ತು ಗ್ರಾಮ ಪಂಚಾಯತಿಗಳಿಂದಲೂ ಸ್ವ-ಸಹಾಯ ಸಂಘಗಳು ರಚನೆಯಾಗಿವೆ. ಎಂ.ಜಿ. ಬ್ಯಾಂಕ್ ೨೮ ಸಂಘಗಳನ್ನು ರಚಿಸಿದೆ. ಈ ಬ್ಯಾಂಕಿನಲ್ಲಿ ಒಟ್ಟು ೧೭೬ ಸಂಘಗಳು ಖಾತೆಗಳನ್ನು ಹೊಂದಿವೆ. ಇದರಲ್ಲಿ ೨೮ ಸಂಘಗಳು ಬ್ಯಾಂಕ್ ವತಿಯಿಂದ ರಚಿತವಾದ ಸಂಘಗಳಿವೆ. ೩,೮೬,೦೦೦ ರೂಗಳನ್ನು ಉಳಿತಾಯ ಮಾಡಿವೆ. ಒಟ್ಟು ಸಂಘಗಳಲ್ಲಿ ೮೨ ಸಂಘಗಳಿಗೆ ಎಮ್ಮೆ, ಆಡು, ವ್ಯವಹಾರ ಮಾಡಲು ೪,೧೦,೦೦೦ ರೂ.ಗಳನ್ನು ಸಾಲವನ್ನು ನೀಡಲಾಗಿದೆ. ಆದರೂ ಸಹ ಅನೇಕ ಸಂಘಗಳು ಹಲವಾರು ಕಾರಣಗಳಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಹೈನುಗಾರಿಕೆಯನ್ನು ಬಿಟ್ಟರೆ ಯಾವುದೇ ಸ್ವಯಂ ಉದ್ಯೋಗವನ್ನು ಕೈಗೊಳ್ಳುವಲ್ಲಿ ಉತ್ಸಾಹ ತೋರಿಸುತ್ತಿಲ್ಲ.

## ೩.೨೩ ಸಂದರ್ಶಿತರ ಆರ್ಥಿಕ ಮತ್ತು ಶೈಕ್ಷಣಿಕ ಹಿನ್ನಲೆ

ಸಂಶೋಧನೆಯಲ್ಲಿ ಆಯ್ಕೆ ಮಾಡಿಕೊಂಡಿರುವ ೩೦೦ ಜನರ ಸಂದರ್ಶನದ ಮೇಲೆ ಅವರ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಹಿನ್ನಲೆಯನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಸಂದರ್ಶನಕ್ಕೆ ಆಯ್ಕೆ ಮಾಡಿಕೊಂಡ ಸಂದರ್ಶಕರನ್ನು ಕ್ರಮವಾಗಿ ಮೇಲೆ ತಿಳಿಸಿರುವ ಎಲ್ಲಾ ಸಂಸ್ಥೆಗಳಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಅದನ್ನು ಈ ಕೆಳಗಿನ ಕೋಷ್ಟಕ ೩.೧೮ ರಲ್ಲಿ ಕಾಣಬಹುದು. ಕೋಷ್ಟಕದಲ್ಲಿ ತಿಳಿಸಿರುವಂತೆ ವಿವಿಧ ಸಂಸ್ಥೆಗಳು ಮತ್ತು ಇಲಾಖೆಗಳು ರಚಿಸಿರುವ ಸ್ವ-ಸಹಾಯ ಸಂಘಗಳ ಆಧಾರದ ಮೇಲೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯಿಂದ ಶೇಕಡ ೩೩.೭, ವಿಮೋಚನದಿಂದ ಶೇಕಡ. ೧೦.೩, ರುಪದಿ ಸಂಸ್ಥೆಯಿಂದ ಶೇಕಡ ೧೯.೭, ವಿಶ್ವೇಶ್ವರಯ್ಯ ಸಂಸ್ಥೆಯಿಂದ ಶೇಕಡ ೧೪ ಮತ್ತು ಬ್ಯಾಂಕ್, ಗ್ರಾಮ ಪಂಚಾಯತಿ ಸಹಕಾರಿ ಕೋ.ಆಪರೇಟಿವ್ ಸೊಸೈಟಿಯಿಂದ ರಚಿತವಾದ ಸ್ವ-ಸಹಾಯ ಸಂಘಗಳಿಂದ ಶೇಕಡ ೨೨.೩ ರಷ್ಟು ಸ್ವ-ಸಹಾಯ ಸಂಘಗಳ ಮಹಿಳ ಸದಸ್ಯರನ್ನು ಸಂದರ್ಶನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಅದನ್ನು ಕೆಳಗಿನ ಕೋಷ್ಟಕ ೩.೧೮ ರಲ್ಲಿ ಕಾಣಬಹುದು.

**ಕೋಷ್ಟಕ ೩.೧೮**
**ಸಂದರ್ಶಿತರ ವಿವರ**

| ಕ್ರ.ಸ | ಗ್ರಾ.ಪಂ. ಹೆಸರು | ಮ.ಮ.ಇ | | ವಿಮೋಚನ | | ರುಪದಿ | | ವಿಶ್ವೇಶ್ವರಯ್ಯ | | ಇತರೆ | | ಒಟ್ಟು | |
|---|---|---|---|---|---|---|---|---|---|---|---|---|---|
| | | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ |
| ೦೧ | ಸತ್ತಿ | ೧೫ | ೩೦ | ೦೨ | ೦೪ | ೧೦ | ೨೦ | ೦೮ | ೧೬ | ೧೫ | ೩೦ | ೫೦ | ೧೬.೬ |
| ೦೨ | ಮದಬಾವಿ | ೧೮ | ೩೬ | ೦೩ | ೦೬ | ೧೩ | ೨೬ | ೦೬ | ೧೨ | ೧೦ | ೨೦ | ೫೦ | ೧೬.೭ |
| ೦೩ | ಮುರಗುಂಡಿ | ೨೦ | ೪೦ | ೦೪ | ೦೮ | ೧೦ | ೨೦ | ೦೮ | ೧೬ | ೦೮ | ೧೬ | ೫೦ | ೧೬.೭ |
| ೦೪ | ಅನಂತಪುರ | ೧೯ | ೩೮ | ೧೦ | ೨೦ | ೧೧ | ೨೨ | – | | ೧೦ | ೨೦ | ೫೦ | ೧೬.೬ |
| ೦೫ | ಶಿರಹಟ್ಟಿ | ೧೩ | ೨೬ | – | – | ೧೫ | ೩೦ | ೧೦ | ೨೦ | ೧೨ | ೨೪ | ೫೦ | ೧೬.೭ |
| ೦೬ | ತೆಲಸಂಗ | ೧೬ | ೩೨ | ೧೨ | ೨೪ | – | – | ೧೦ | ೨೦ | ೧೨ | ೨೪ | ೫೦ | ೧೬.೭ |
| | ಒಟ್ಟು | ೧೦೧ | ೩೩.೭ | ೩೧ | ೧೦.೩ | ೫೯ | ೧೯.೭ | ೪೨ | ೧೪.೦ | ೬೭ | ೨೨.೩ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯನದಿಂದ ಸಂಗ್ರಹಿಸಿದ ಮಾಹಿತಿ. (ಸಂ= ಸಂಖ್ಯೆ. ಶೇ= ಶೇಕಡ)

### ೩.೨೪ ವಯಸ್ಸು

ವಯಸ್ಸು ಮೇಲ್ನೋಟಕ್ಕೆ ವ್ಯಕ್ತಿಯ ಜೀವಿತದ ಅವಧಿಯನ್ನು ತೋರಿಸುತ್ತದೆ. ಆದರೆ ಅಭಿವೃದ್ಧಿಯ ಬಗ್ಗೆ ಹೊಂದಿರುವವರ ಅಭಿಪ್ರಾಯಗಳು ಮತ್ತು ಬದಲಾವಣೆ ಬಯಸುವಂತವರು ಅತೀ ಕಡಿಮೆ ವಯಸ್ಸಿನವರಾಗಿರಬಹುದು, ಇಲ್ಲವೆ ಅತೀ ಹೆಚ್ಚು ವಯಸ್ಸಿನವರಾಗಿರಬಹುದು. ಅದು ಪ್ರತಿಯೊಂದು ಹಂತವನ್ನು ನೋಡುತ್ತಾ ಬಂದಿರುವವರ ಅನುಭವ ಇವರಿಗಿಂತಲೂ ಭಿನ್ನವಾದುದು, ಯಾವ ಕ್ಷೇತ್ರದಲ್ಲಿ, ಯಾವ ಪ್ರಮಾಣದಲ್ಲಿ ಯಾವ ಅವಧಿಯಲ್ಲಿ ಆಗಿದೆ? ಅದಕ್ಕೆ ಕಾರಣವೇನು? ಮೊದಲಾದ ಅಂಶಗಳ ಬಗ್ಗೆ ಹೆಚ್ಚು ಅರಿವುಳ್ಳವರು ಹೆಚ್ಚು ವಯಸ್ಸನ್ನು ಹೊಂದಿರುವವರಾಗಿರುತ್ತಾರೆ ಎಂಬುದು ಸರ್ವೆ ಸಾಮಾನ್ಯ ಅಭಿಪ್ರಾಯ. ಇದರ ಜೊತೆಗೆ ಗ್ರಾಮದ ಒಗ್ಗಟ್ಟಿನಿಂದ ಅಲ್ಲಿನ ಗುಟ್ಟನ್ನು ಬಿಟ್ಟು ಕೊಡದೆ ಇರುವ ವರ್ಗವು ಇದಾಗಿರಬಹುದು. ಅತ್ಯಂತ ಕಡಿಮೆ ವಯಸ್ಸಿನವರು ಉತ್ಸಾಹಿಗಳಾಗಿದ್ದು, ಬೇಗ ಅಭಿವೃದ್ಧಿ ಹೊಂದುವ ಪ್ರವೃತ್ತಿ ಹೊಂದಿರುತ್ತಾರೆ. ಅದಕ್ಕಾಗಿ ೧೮-೫೦ ವರ್ಷ ಮೇಲ್ಪಟ್ಟ ವರ್ಗವನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ.

### ೩.೨೫ ವಯಸ್ಸಿನ ವಿವರಣೆ

ಕೋಷ್ಟಕ ೩.೧೯ ರಲ್ಲಿ ವಿಂಗಡಿಸಿರುವಂತೆ ಶೇ ೨೫.೦ ರಷ್ಟು ಸಂದರ್ಶಿತರ ವಯಸ್ಸು ೧೮ ರಿಂದ ೨೫ ಆಗಿದ್ದರೆ, ೨೬-೩೫ ವಯಸ್ಸಿನವರು ಶೇಕಡ ೩೮.೩ ರಷ್ಟಿದ್ದಾರೆ. ಶೇಕಡ ೨೫.೭ ರಷ್ಟು ೩೬ ರಿಂದ ೪೫ ವರ್ಷ ವಯಸ್ಸಿನವರಾಗಿದ್ದರೆ, ೫೦ ವರ್ಷ ಮೇಲ್ಪಟ್ಟವರ ವಯಸ್ಸಿನ ಪ್ರಮಾಣ ಶೇಕಡ ೧೦.೩ ರಷ್ಟಿದೆ. ೫೦ ವರ್ಷ ಮೇಲ್ಪಟ್ಟವರ ಹೆಚ್ಚಿನ ಪ್ರಮಾಣ ಮುರಗುಂಡಿ ಗ್ರಾಮ ಪಂಚಾಯತಿಯಲ್ಲಿದೆ. ಅದು ಶೇಕಡ ೨೦ ರಷ್ಟಿದೆ. ಆದರೆ ಅನಂತಪುರ ಶೇಕಡ ೪ ರಷ್ಟು ಮತ್ತು ತೆಲಸಂಗ ಶೇಕಡ ೪ ರಷ್ಟು ಮಾತ್ರ ಹೊಂದಿವೆ. ವಿವಿಧ ವಯಸ್ಸಿನವರ ಶೇಕಡವಾರು ಪ್ರಮಾಣವನ್ನು ಕೆಳಗಿನ ಕೋಷ್ಟಕ ೩.೧೯ ರಲ್ಲಿ ಕಾಣಬಹುದು.

**ಕೋಷ್ಟಕ ೩.೧೯**

**ಸಂದರ್ಶಿತ ವರ್ಗದ ವಯಸ್ಸಿನ ವಿವರಣೆ**

| ಕ್ರ ಸಂ | ವಯಸ್ಸು | ೧೮ ರಿಂದ ೨೫ | | ೨೬ರಿಂದ ೩೫ | | ೩೬ರಿಂದ ೪೫ | | ೫೦ಮೇಲ್ಪಟ್ಟು | | ಒಟ್ಟು | |
|---|---|---|---|---|---|---|---|---|---|---|---|
| | | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ |
| ೦೧ | ಸತ್ತಿ | ೧೦ | ೨೦ | ೨೫ | ೫೦ | ೧೦ | ೨೦ | ೦೫ | ೧೦ | ೫೦ | ೧೬.೬ |
| ೦೨ | ಮದಬಾವಿ | ೧೨ | ೨೪ | ೧೮ | ೩೬ | ೧೫ | ೩೦ | ೦೫ | ೧೦ | ೫೦ | ೧೬.೭ |
| ೦೩ | ಮುರಗುಂಡಿ | ೧೫ | ೩೦ | ೧೪ | ೨೮ | ೧೧ | ೨೨ | ೧೦ | ೨೦ | ೫೦ | ೧೬.೭ |
| ೦೪ | ಅನಂತಪುರ | ೧೩ | ೨೬ | ೧೭ | ೩೪ | ೧೮ | ೩೬ | ೦೨ | ೦೪ | ೫೦ | ೧೬.೬ |
| ೦೫ | ಶಿರಹಟ್ಟಿ | ೧೬ | ೩೨ | ೧೪ | ೨೮ | ೧೩ | ೨೬ | ೦೭ | ೧೪ | ೫೦ | ೧೬.೭ |
| ೦೬ | ತೆಲಸಂಗ | ೦೯ | ೧೮ | ೨೭ | ೫೪ | ೧೦ | ೨೦ | ೦೨ | ೦೪ | ೫೦ | ೧೬.೭ |
| ಒಟ್ಟು | | ೭೫ | ೨೫.೦ | ೧೧೫ | ೩೮.೩ | ೭೭ | ೨೫.೭ | ೩೧ | ೧೦.೩ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯನದಿಂದ ಸಂಗ್ರಹಿಸಿದ ಮಾಹಿತಿ. (ಸಂ= ಸಂಖ್ಯೆ. ಶೇ= ಶೇಕಡ)

**ಕೋಷ್ಟಕ ೩.೨೦**

**ಸಂದರ್ಶಿತರ ಕುಟುಂಬದ ವಿಂಗಡಣೆ**

| ಕ್ರಸಂ | ಗ್ರಾ. ಪಂ | ವಿಭಕ್ತ ಕುಟುಂಬ | | ಅವಿಭಕ್ತ ಕುಟುಂಬ | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ೦೧ | ಸತ್ತಿ | ೧೫ | ೩೦ | ೩೫ | ೭೦ | ೫೦ | ೧೬.೬ |
| ೦೨ | ಮದಬಾವಿ | ೦೯ | ೧೮ | ೪೧ | ೮೨ | ೫೦ | ೧೬.೭ |
| ೦೩ | ಮುರಗುಂಡಿ | ೦೮ | ೧೬ | ೪೨ | ೮೪ | ೫೦ | ೧೬.೭ |
| ೦೪ | ಅನಂತಪುರ | ೧೦ | ೨೦ | ೪೦ | ೮೦ | ೫೦ | ೧೬.೬ |
| ೦೫ | ಶಿರಹಟ್ಟಿ | ೦೯ | ೧೮ | ೪೧ | ೮೨ | ೫೦ | ೧೬.೭ |
| ೦೬ | ತೆಲಸಂಗ | ೧೧ | ೨೨ | ೩೯ | ೭೮ | ೫೦ | ೧೬.೭ |
| ಒಟ್ಟು | | ೬೨ | ೨೦.೭ | ೨೩೮ | ೭೯.೩ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯನದಿಂದ ಸಂಗ್ರಹಿಸಿದ ಮಾಹಿತಿ.

## ೩. ೨೬ ಕುಟುಂಬದ ವಿಂಗಡಣೆ

ಕೋಷ್ಟಕ ೩.೨೦ ರಲ್ಲಿ ತಿಳಿಸಿರುವಂತೆ ಒಟ್ಟು ಸಂದರ್ಶಿತರಲ್ಲಿ ಶೇಕಡ ೨೦.೭ ರಷ್ಟು ವಿಭಕ್ತ ಕುಟುಂಬದಿಂದ ಬಂದವರಾಗಿದ್ದರೆ, ಶೇಕಡ ೭೯.೩ ರಷ್ಟು ಅವಿಭಕ್ತ ಕುಟುಂಬದಿಂದ ಬಂದವರಾಗಿದ್ದಾರೆ. ಗ್ರಾಮ ಪಂಚಾಯತಿವಾರು ಸಂದರ್ಶಿತರ ಸಂದರ್ಶಕರ ಕುಟುಂಬದ ವಿಂಗಡನೆಯನ್ನು ಕೋಷ್ಟಕ ೩.೨೦ ರಲ್ಲಿ ತಿಳಿಸಲಾಗಿದೆ. ಸತ್ತಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು ಶೇಕಡ. ೩೦ ವಿಭಕ್ತ ಕುಟುಂಬಗಳು, ಶೇಕಡ. ೭೦ ಅವಿಭಕ್ತ ಕುಟುಂಬಗಳು, ಹಾಗೂ ಮದಭಾವಿ ಗ್ರಾಮ ಪಂಚಾಯತ ವ್ಯಾಪ್ತಿಯಲ್ಲಿ ಶೇಕಡ.೧೮ ವಿಭಕ್ತ , ಶೇಕಡ ೮೨ ಅವಿಭಕ್ತ ಕುಟುಂಬಗಳು, ಮುರುಗುಂಡಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು ಶೇಕಡ ೧೬ ವಿಭಕ್ತ ಕುಟುಂಬಗಳು, ಶೇಕಡ ೮೪ ಅವಿಭಕ್ತ ಕುಟುಂಬಗಳು, ಅನಂತಪೂರ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಶೇಕಡ ೨೦ ವಿಭಕ್ತ, ಶೇಕಡ ೮೦ ಅವಿಭಕ್ತ ಕುಟುಂಬಗಳು, ಶಿರಹಟ್ಟಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು ಶೇಕಡ ೧೮ ವಿಭಕ್ತ ಕುಟುಂಬಗಳು ಶೇಕಡ ೮೨ ಅವಿಭಕ್ತ ಕುಟುಂಬಗಳು ಹಾಗೂ ತೆಲಸಂಗ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು ಶೇಕಡ ೨೨ ವಿಭಕ್ತ ಕುಟುಂಬಗಳು, ಶೇಕಡ ೭೮ ಅವಿಭಕ್ತ ಕುಟುಂಬಗಳು ಸಂದರ್ಶನಕ್ಕೆ ಒಳಪಡಿಸಲಾಗಿದೆ. ಇದರಿಂದ ತಿಳಿದು ಬರುವುದೇನೆಂದರೆ, ಅವಿಭಕ್ತ ಕುಟುಂಬ ವ್ಯವಸ್ಥೆ ಕಡಿಮೆಯಾಗುತ್ತಿದ್ದು, ಉದ್ಯೋಗ, ವಸತಿ, ನೈರ್ಮಲ್ಯ ಸಮಸ್ಯೆಗಳು ಹೆಚ್ಚಾಗುವ ಸಾಧ್ಯತೆ ಇರುತ್ತದೆ.

## ೩.೨೭ ಜಾತಿ

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಜಾತಿಯು ಪ್ರಮುಖ ಪಾತ್ರ ವಹಿಸುತ್ತದೆ. ಮೀಸಲಾತಿಯ ಆಧಾರದ ಮೇಲೆ ಎಲ್ಲಾ ವರ್ಗಕ್ಕೂ ಸಮಾನ ಅವಕಾಶವನ್ನು ನೀಡಲಾಗಿದೆ. ಆದರೆ ಮೀಸಲಾತಿ ವ್ಯವಸ್ಥೆಯಿಂದ ಇನ್ನೂ ಯಾವ ವರ್ಗವೂ ಪರಿಪೂರ್ಣವಾಗಿ, ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗಿಲ್ಲ. ಅದು ಸ್ವ-ಸಹಾಯ ಸಂಘಗಳಿಗೂ ಅನ್ವಯವಾಗುತ್ತದೆ. ಇದಕ್ಕೆ ಕಾರಣಗಳನ್ನು ಕಂಡುಕೊಳ್ಳಲು ಸಂದರ್ಶಕರನ್ನು ಮೂರು ವರ್ಗಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

## ಕೋಷ್ಟಕ ೩.೨೧

## ಸಂದರ್ಶಿತರ ಜಾತಿಯ ವಿಂಗಡಣೆ

| ಕ್ರಸಂ | ಗ್ರಾ. ಪಂ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಇತರೆ | | ಒಟ್ಟು | |
|---|---|---|---|---|---|---|---|---|---|
| | | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ೦೧ | ಸತ್ತಿ | ೨೦ | ೪೦ | ೧೦ | ೨೦ | ೨೦ | ೪೦ | ೫೦ | ೧೬.೬ |
| ೦೨ | ಮದಬಾವಿ | ೩೮ | ೭೬ | – | – | ೧೨ | ೨೪ | ೫೦ | ೧೬.೭ |
| ೦೩ | ಮುರಗುಂಡಿ | ೩೯ | ೭೮ | – | – | ೧೧ | ೨೨ | ೫೦ | ೧೬.೭ |
| ೦೪ | ಅನಂತಪುರ | ೨೮ | ೫೬ | ೦೨ | ೦೪ | ೨೦ | ೪೦ | ೫೦ | ೧೬.೬ |
| ೦೫ | ಶಿರಹಟ್ಟಿ | ೧೯ | ೩೮ | ೦೧ | ೦೨ | ೩೦ | ೬೦ | ೫೦ | ೧೬.೭ |
| ೦೬ | ತೆಲಸಂಗ | ೨೧ | ೪೨ | ೦೭ | ೧೪ | ೨೨ | ೪೪ | ೫೦ | ೧೬.೭ |
| ಒಟ್ಟು | | ೧೬೫ | ೫೫ | ೨೦ | ೬.೭ | ೧೧೫ | ೩೮.೩ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯನದಿಂದ ಸಂಗ್ರಹಿಸಿದ ಮಾಹಿತಿ.

ಕೋಷ್ಟಕ ೩.೨೧ ರಲ್ಲಿ ತಿಳಿಸಿರುವಂತೆ ಒಟ್ಟು ಸಂದರ್ಶಿತರಲ್ಲಿ ಶೇಕಡ ೫೫ ರಷ್ಟು ಪರಿಶಿಷ್ಟ ಜಾತಿಗೆ ಸೇರಿದ್ದರೆ, ಶೇಕಡ ೬.೭ ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ ಮತ್ತು ಜೈನ್, ಲಿಂಗಾಯತ, ಕುರುಬ ಮೊದಲಾದ ವರ್ಗಕ್ಕೆ ಸೇರಿದವರ ಪ್ರಮಾಣ ಶೇಕಡ ೩೮.೩ ರಷ್ಟಿದೆ. ಅದನ್ನು ಮೇಲಿನ ಕೋಷ್ಟಕ ೩.೨೧ ರಲ್ಲಿ ಕಾಣಬಹುದು.

## ಕೋಷ್ಟಕ ೩.೨೨

## ಸಂದರ್ಶಿತರ ವೈವಾಹಿಕ ಅಂತಸ್ತು

| ಕ್ರಸಂ | ಗ್ರಾ. ಪಂ | ವಿವಾಹಿತೆ | | ಅವಿವಾಹಿತೆ | | ವಿಚ್ಛೇದಿತೆ | | ವಿಧವೆ | | ಒಟ್ಟು | |
|---|---|---|---|---|---|---|---|---|---|---|---|
| | | ಸ | ಶೇ | ಸ | ಶೇ | ಸ | ಶೇ | ಸಂ | ಶೇ | ಸಂ | ಶೇ |
| ೦೧ | ಸತ್ತಿ | ೩೦ | ೬೦ | ೧೭ | ೩೪ | ೦೧ | ೦೨ | ೦೨ | ೦೪ | ೫೦ | ೧೬.೬ |
| ೦೨ | ಮದಬಾವಿ | ೩೧ | ೬೨ | ೧೬ | ೩೨ | ೦೨ | ೦೪ | ೦೧ | ೦೨ | ೫೦ | ೧೬.೭ |
| ೦೩ | ಮುರಗುಂಡಿ | ೩೩ | ೬೬ | ೧೫ | ೩೦ | – | – | ೦೨ | ೦೪ | ೫೦ | ೧೬.೭ |
| ೦೪ | ಅನಂತಪುರ | ೩೭ | ೭೪ | ೧೦ | ೨೦ | – | – | ೦೩ | ೦೬ | ೫೦ | ೧೬.೬ |
| ೦೫ | ಶಿರಹಟ್ಟಿ | ೩೪ | ೬೮ | ೧೩ | ೨೬ | ೦೧ | ೦೨ | ೦೨ | ೦೪ | ೫೦ | ೧೬.೭ |
| ೦೬ | ತೆಲಸಂಗ | ೩೪ | ೬೮ | ೧೧ | ೨೨ | ೦೨ | ೦೪ | ೦೩ | ೦೬ | ೫೦ | ೧೬.೭ |
| ಒಟ್ಟು | | ೧೯೯ | ೬೬.೩ | ೮೨ | ೨೭.೩ | ೦೬ | ೨.೦ | ೧೩ | ೪.೩ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯನದಿಂದ ಸಂಗ್ರಹಿಸಿದ ಮಾಹಿತಿ. (ಗ್ರಾ.ಪಂ= ಗ್ರಾಮ ಪಂಚಾಯತಿ)

ಕೋಷ್ಟಕ ೩.೨೨ ರಲ್ಲಿ ವಿಂಗಡಿಸಿರುವಂತೆ ಸಂದರ್ಶನಕ್ಕೆ ಒಳಪಡಿಸಿಕೊಂಡ ಒಟ್ಟು ಸಂದರ್ಶಿತರಲ್ಲಿ ಶೇಕಡ ೬೬.೩ ರಷ್ಟು ವಿವಾಹಿತರು, ಶೇಕಡ ೨೭.೩ ರಷ್ಟು ಅವಿವಾಹಿತರು ಶೇಕಡ. ೨.೦ ರಷ್ಟು ವಿಚ್ಛೇದಿತರಾಗಿದ್ದರೆ ಶೇಕಡ ೪.೩ ರಷ್ಟು ವಿಧವೆಯರಾಗಿದ್ದಾರೆ. ಪಂಚಾಯತಿನಿಂದ ಪಂಚಾಯತಿಗೆ ಈ ಪ್ರಮಾಣ ವ್ಯತ್ಯಾಸವಾಗಿರುವುದನ್ನು ಕಾಣಬಹುದು.

## ೩.೨೮ ಶಿಕ್ಷಣ

ಮಹಿಳೆಯರ ಸಬಲೀಕರಣವಾಗಬೇಕಾದರೆ ಸರಿಯಾದ ಶಿಕ್ಷಣ ದೊರೆಯಬೇಕು. ಅದರಿಂದ ಸರಿಯಾಗಿ ಅರ್ಥಮಾಡಿಕೊಂಡು ಅಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಕೋಷ್ಟಕದಲ್ಲಿ ತೋರಿಸಿರುವಂತೆ ಸಂದರ್ಶಿತರಲ್ಲಿ ಒಟ್ಟು ಶೇಕಡ ೬೨ ರಷ್ಟು ಅನಕ್ಷರಸ್ಥರು, ಶೇಕಡ ೧೩.೭ ಪ್ರಾಥಮಿಕ, ಶೇಕಡ ೧೧.೩ ಮಾಧ್ಯಮಿಕಶೇಕಡ ೯.೦ ಪ್ರೌಢ, ಶೇಕಡ ೨.೭ ಪದವಿ ಪೂರ್ವ, ಶೇಕಡ ೦.೭ ಪದವಿ ಹಾಗೂ ಶೇಕಡ ೦.೩ ರಷ್ಟು ಇತರೆ ಶಿಕ್ಷಣವನ್ನು ಕಲಿತಿದ್ದಾರೆ.

ಕೋಷ್ಟಕ ೩.೨೩

ಸಂದರ್ಶಿತರ ಶಿಕ್ಷಣದ ವಿಂಗಡಣೆ

| ಕ್ರ ಸಂ | ಗ್ರಾ. ಪಂ | ಪ್ರಾಥಮಿಕ | | ಮಾಧ್ಯಮಿಕ | | ಪ್ರೌಢ | | ಪ. ಪೂ | | ಪದವಿ | | ಇತರೆ | | ಅನಕ್ಷರತೆ | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|
| | | ಪಂ | ಶೇ | ಪಂ | ಶೇ | ಪಂ | ಶೇ | ಪಂ | ಶೇ | ಪಂ | ಶೇ | ಪಂ | ಶೇ | ಪಂ | ಶೇ | ಪಂ | ಶೇ |
| ೦೧ | ಸತ್ತಿ | ೦೬ | ೧೨ | ೦೪ | ೦೮ | ೦೩ | ೦೬ | ೦೨ | ೦೪ | – | – | – | ೦ | ೩೫ | ೭೦ | ೫೦ | ೧೬.೬ |
| ೦೨ | ಮದಬಾವಿ | ೦೫ | ೧೦ | ೦೭ | ೧೪ | ೦೮ | ೧೬ | ೦೧ | ೦೨ | – | – | – | ೦ | ೨೯ | ೫೮ | ೫೦ | ೧೬.೭ |
| ೦೩ | ಮುರಗುಂಡಿ | ೦೭ | ೧೪ | ೦೯ | ೧೮ | ೦೪ | ೦೮ | ೦೧ | ೦೨ | ೦೧ | ೦೨ | – | – | ೨೮ | ೫೬ | ೫೦ | ೧೬.೭ |
| ೦೪ | ಅನಂತಪುರ | ೦೯ | ೧೮ | ೦೩ | ೦೬ | ೦೫ | ೧೦ | ೦೨ | ೦೪ | – | – | – | – | ೩೧ | ೬೨ | ೫೦ | ೧೬.೬ |
| ೦೫ | ಶಿರಟ್ಟಿ | ೦೮ | ೧೬ | ೦೬ | ೧೨ | ೦೩ | ೦೬ | ೦೧ | ೦೨ | ೦೧ | ೦೨ | ೦೧ | ೦೨ | ೩೦ | ೬೦ | ೫೦ | ೧೬.೭ |
| ೦೬ | ತೆಲಸಂಗ | ೦೬ | ೧೨ | ೦೫ | ೧೦ | ೦೪ | ೦೮ | ೦೨ | ೦೪ | | – | – | – | ೩೩ | ೬೬ | ೫೦ | ೧೬.೭ |
| | ಒಟ್ಟು | ೪೧ | ೧೩.೭ | ೩೪ | ೧೧.೩ | ೨೭ | ೯.೦ | ೦೮ | ೨.೭ | ೦೨ | ೦.೭ | ೦೧ | ೦.೩ | ೧೮೬ | ೬೨ | ೩೦೦ | ೧೦೦ |

ಆಕರ : ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.

# ಅಧ್ಯಾಯ–೪

## ಮಹಿಳಾ ಸಬಲೀಕರಣ ಮತ್ತು ಸ್ವ-ಸಹಾಯ ಸಂಘಗಳು

### ೪.೧ ಪೀಠಿಕೆ

ಮಹಿಳೆಯರು ರಾಷ್ಟ್ರದ ಅಭಿವೃದ್ಧಿಯ ಪ್ರತೀಕ. ಏಕೆಂದರೆ ಮಹಿಳೆಯರ ಅಭಿವೃದ್ಧಿಯ ಮೇಲೆ ಗ್ರಾಮ ಮತ್ತು ರಾಷ್ಟ್ರದ ಅಭಿವೃದ್ಧಿ ನಿಂತಿದೆ. ಆದರೆ ಮಹಿಳೆಯರ ಅಭಿವೃದ್ಧಿ ಮಹಿಳೆಯರ ಆಸಕ್ತಿ, ಸಾಮರ್ಥ್ಯ, ತಿಳುವಳಿಕೆಯ ಮೇಲೆ ಮತ್ತು ಸರ್ಕಾರದ, ಸ್ವಯಂ ಸೇವಾ ಸಂಸ್ಥೆಗಳ ಸಹಕಾರವನ್ನು ಅವಲಂಭಿಸಿದೆ. ಈ ನಿಟ್ಟಿನಲ್ಲಿ ಸರ್ಕಾರ ೮ ನೇ ಪಂಚವಾರ್ಷಿಕ ಯೋಜನೆಯಲ್ಲಿ 'ಮಹಿಳೆ ಮತ್ತು ಅಭಿವದ್ಧಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಯಿತು.[೧] ಇದಕ್ಕೆ ಪೂರಕವಾಗಿ ಕೇಂದ್ರ-ರಾಜ್ಯ ಸರ್ಕಾರಗಳು ವಿವಿಧ ಯೋಜನೆಗಳನ್ನು ಜಾರಿಗೊಳಿಸುತ್ತಾ ಬರುತ್ತಿವೆ. ಅದರಲ್ಲೂ ಸ್ವ-ಸಹಾಯ ಸಂಘಗಳ ರಚನೆ, ಉಳಿತಾಯ, ಉದ್ಯೋಗಗಳ ಮೂಲಕ ಮಹಿಳಾ ಸಬಲೀಕರಣಕ್ಕೆ ಎಲ್ಲಿಲ್ಲದ ಮಹತ್ವವನ್ನು ನೀಡಲಾಯಿತು. ನಬಾರ್ಡ ೧೯೯೬-೯೭ ರಲ್ಲಿ ಸ್ವ-ಸಹಾಯ ಸಂಘಗಳನ್ನು ರಚಿಸಲು ಎಲ್ಲಾ ರೀತಿಯ ನೆರವನ್ನು ನೀಡಲು ಪ್ರಾರಂಭಿಸಿತು. ಕೇಂದ್ರ ಸರ್ಕಾರ ಎಸ್. ಜಿ. ಎಸ್. ವೈ ಯೋಜನೆಯ ಮೂಲಕ ಸಂಘಗಳ ರಚನೆಗಾಗಿ ನೆರವನ್ನು ನೀಡಲಾಗುತ್ತಿದೆ. ಈ ನಿಟ್ಟಿನಲ್ಲಿ ಮಹಿಳಾ ಸಬಲೀಕರಣದಲ್ಲಿ ಸ್ವ-ಸಹಾಯ ಸಂಘಗಳ ಪಾತ್ರ ಕುರಿತು ಸಂಶೋಧನೆಯಲ್ಲಿ ಕಂಡುಕೊಂಡ ಅಂಶಗಳನ್ನು ಪ್ರಸ್ತುತ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

### ೪.೨ ಸಂಘದ ಸದಸ್ಯರ ವಯಸ್ಸು

ಮಹಿಳೆಯರ ಸಬಲೀಕರಣದಲ್ಲಿ ವಯಸ್ಸು ಪ್ರಮುಖ ಪಾತ್ರವಹಿಸುತ್ತದೆ. ಮಹಿಳೆಯರ ಸಬಲೀಕರಣವಾಗಬೇಕಾದರೆ ಸಂಘಗಳಲ್ಲಿ ಇರುವ ಸದಸ್ಯರ ವಯಸ್ಸು ಅತೀ ಕಡಿಮೆ ಇರಬಾರದು, ಇಲ್ಲವೆ ಅತೀ ಹೆಚ್ಚೂ ಇರಬಾರದು. ಅತೀ ಕಡಿಮೆ ಇದ್ದರೆ, ಮಹಿಳೆಯ ವಿವಾಹವಾದ ನಂತರ ತನ್ನ ಪತಿಯ ಮನೆಗೆ ಹೋಗುತ್ತಾಳೆ. ಅದರಿಂದ ಸಂಘವು ಮುರಿದು ಹೋಗಬಹುದು. ಏಕೆಂದರೆ ಪುನ: ಸಂಘಕ್ಕೆ ಬೇರೆಯವರನ್ನು ಸೇರಿಸಿಕೊಳ್ಳುವಾಗ ಸಂಘದ ಸದಸ್ಯರ ನಡುವೆ ವಿರೋಧಗಳು ಉಂಟಾಗುತ್ತವೆ. ಏಕೆಂದರೆ ತಡವಾಗಿ ಸಂಘವನ್ನು ಸೇರಿದವರಿಗೆ ಲಾಭವನ್ನು ಕೊಡಬೇಕು ಎನ್ನುವ ಭಾವನೆಯಿಂದ ಸಂಘಕ್ಕೆ ಸೇರಿಸಿಕೊಳ್ಳಲು ಇಚ್ಛಿಸುವುದಿಲ್ಲ. ಅತೀ ಹೆಚ್ಚಿನ ವಯಸ್ಸಿನವರು ಸಂಘದಲ್ಲಿ ಸೇರಿಕೊಂಡರೆ ಸಣ್ಣ ಉದ್ದಿಮೆಗಳನ್ನು ರಚಿಸಿಕೊಂಡು ಉದ್ಯೋಗವನ್ನು ಮಾಡಲು ಇಚ್ಛಿಸುವುದಿಲ್ಲ. ಇದಕ್ಕೆ ಸಂಬಂಧಿಸಿದಂತೆ ಸಂದರ್ಶಿತ ಸಂಘದ ಸದಸ್ಯರ ವಯಸ್ಸು ಅಸಮಾನತೆಯಿಂದ ಕೂಡಿದೆ. ಸಂಘವನ್ನು ಒಂದೇ ವಯಸ್ಸಿನವರು ಸೇರಿ ರಚಿಸಿಕೊಂಡರೆ ಉತ್ತಮ. ಅದರಿಂದ ಎಲ್ಲರೂ ಒಂದೇ ಅಭಿಪ್ರಾಯವನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತದೆ

ಮತ್ತು ಒಂದೇ ನಿರ್ಧಾರವನ್ನು ತಗೆದುಕೊಳ್ಳುವಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗುವುದಿಲ್ಲ. ಅದರಂತೆ ಸಂದರ್ಶಿತ ಸದಸ್ಯರಲ್ಲಿ ೨೦ ಕ್ಕಿಂತ ಕಡಿಮೆ ವಯಸ್ಸಿನವರು ಶೇಕಡ ೧೪ ರಷ್ಟಿದ್ದರೆ, ೨೦ ರಿಂದ ೪೦ ವರ್ಷ ವಯಸ್ಸಿನವರು ಶೇಕಡ ೪೧.೩ ರಷ್ಟಿದ್ದಾರೆ. ೪೦ ರಿಂದ ೫೦ ವರ್ಷ ವಯಸ್ಸಿನವರು ಶೇಕಡ ೩೮ ರಷ್ಟಿದ್ದರೆ, ೫೦ ವರ್ಷ ಮೇಲ್ಪಟ್ಟ ವಯಸ್ಸಿನವರು ಶೇಕಡ ೬.೭ ರಷ್ಟಿದ್ದಾರೆ. ಅದು ಗ್ರಾಮ ಪಂಚಾಯತಿಯಿಂದ ಗ್ರಾಮ ಪಂಚಾಯತಿಗೆ ಭಿನ್ನವಾಗಿದೆ. ೪೦ ವಯಸ್ಸಿನ ಮೇಲ್ಪಟ್ಟವರನ್ನು ಸಂದರ್ಶಿಸಿದಾಗ ಕಂಡು ಬಂದುದ್ದೇನೆಂದರೆ ಆಡು, ಎಮ್ಮೆಗಳ ಸಾಕಣಿಕೆಗೆ ಹೆಚ್ಚು ಆಸಕ್ತಿ ಹೊಂದಿದ್ದಾರೆಯೇ ವಿನಃ ಸಣ್ಣ ಉದ್ದಿಮೆಗಳನ್ನು ಸ್ಥಾಪಿಸಲು ಆಸಕ್ತಿ ಹೊಂದಿರುವುದಿಲ್ಲ. ಕೇವಲ ಒಂದು ಎಮ್ಮೆಯನ್ನು ಸಾಕಿದರೆ ಕುಟುಂಬದ ಸಮಸ್ಯೆಗಳು ನಿವಾರಣೆಯಾಗುವುದಿಲ್ಲ. ಏಕೆಂದರೆ ಉತ್ಪಾದಿತ ಹಾಲು ಮನೆಯ ಬಳಕೆಗೆ ಹೆಚ್ಚು ಬಳಕೆಯಾಗುತ್ತದೆ. ಅದರಿಂದ ಪಡೆದ ಸಾಲವೂ ಬೇಗನೆ ತೀರುವುದಿಲ್ಲ. ಅಲ್ಲದೆ ಸಂಘದ ಸದಸ್ಯರೆಲ್ಲರೂ ಸಾಮೂಹಿಕವಾಗಿ ಸಾಕಿ ಹೆಚ್ಚು ಆದಾಯವನ್ನು ಗಳಿಸಲು ಆಸಕ್ತಿ ಹೊಂದಿರುವುಲ್ಲ. ಸಂಘವನ್ನು ರಚಿಸಿರುವ ಸ್ವಯಂ ಸೇವಾ ಸಂಸ್ಥೆಗಳು ಸಹ ವೈಯಕ್ತಿವಾಗಿ ಎಮ್ಮೆಗಳನ್ನು ಸಾಕಲು ಒತ್ತು ನೀಡಿರುವುದು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಯಿತು. ಇದಕ್ಕೆ ಕಾರಣವೆಂದರೆ ವಯಸ್ಸಿನಲ್ಲಿ ಅಸಮಾನತೆ ಇರುವುದು. ಅದರಂತೆ ಸಂಘದ ಸದಸ್ಯರ ವಯಸ್ಸಿನ ಅಸಮಾನತೆಯನ್ನು ಕೋಷ್ಟಕ ೪.೧ ರಲ್ಲಿ ಕಾಣಬಹುದು.

ಕೋಷ್ಟಕ ೪.೧

ಸಂಘದ ಸದಸ್ಯರ ವಯಸ್ಸು

| ಕ್ರ.ಸಂ | ಗ್ರಾಮ ಪಂಚಾಯತಿ | ೨೦ಕ್ಕಿಂತ ಕಡಿಮೆ | | ೨೦-೪೦ | | ೪೦-೫೦ | | ೫೦ವರ್ಷ ಮೇಲ್ಪಟ್ಟು | | ಒಟ್ಟು | |
|---|---|---|---|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೦೩ | ೦೬ | ೨೫ | ೫೦ | ೨೦ | ೪೦ | ೦೨ | ೦೪ | ೫೦ | ೧೬.೬ |
| ೦೨ | ಮದಬಾವಿ | ೦೬ | ೧೨ | ೧೭ | ೩೪ | ೨೨ | ೪೪ | ೦೫ | ೧೦ | ೫೦ | ೧೬.೭ |
| ೦೩ | ಮುರಗುಂಡಿ | ೧೦ | ೨೦ | ೨೦ | ೪೦ | ೧೮ | ೩೬ | ೦೨ | ೦೪ | ೫೦ | ೧೬.೭ |
| ೦೪ | ಅನಂತಪುರ | ೦೭ | ೧೪ | ೨೧ | ೪೨ | ೧೮ | ೩೬ | ೦೪ | ೦೮ | ೫೦ | ೧೬.೬ |
| ೦೫ | ಶಿರಹಟ್ಟಿ | ೦೯ | ೧೮ | ೧೯ | ೩೮ | ೧೯ | ೩೮ | ೦೩ | ೦೬ | ೫೦ | ೧೬.೭ |
| ೦೬ | ತೆಲಸಂಗ | ೦೭ | ೧೪ | ೨೨ | ೪೪ | ೧೭ | ೩೪ | ೦೪ | ೦೮ | ೫೦ | ೧೬.೭ |
| ಒಟ್ಟು | | ೪೨ | ೧೪ | ೧೨೪ | ೪೧.೩ | ೧೧೪ | ೩೮ | ೨೦ | ೬.೭ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೩ ಸಾಕ್ಷರತೆ

ಸಾಕ್ಷರತೆ ಸಂಘದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಬಲ್ಲದು. ಏಕೆಂದರೆ ಮಹಿಳಾ ಅಭಿವೃದ್ಧಿಯಲ್ಲಿ ಪರಿವರ್ತನಾಶೀಲತೆಯನ್ನು ತರುವಲ್ಲಿ ಶಿಕ್ಷಣ ಮಹತ್ವದ್ದಾಗಿದೆ. ಆದರೆ ಸಂಘಗಳನ್ನು ರಚಿಸುವ ಸಂಸ್ಥೆಗಳು ನಿಷ್ಪಕ್ಷಪಾತವಾಗಿ ತಮ್ಮ ಸೇವೆಯನ್ನು ಸಲ್ಲಿಸಿದರೆ ಮಾತ್ರ ಸಂಘದ ಸದಸ್ಯರು ಸಾಕ್ಷರಸ್ಥರಾಗಬಲ್ಲರು ಸಂಘದ. ಕನಿಷ್ಟ ದಾಖಲೆ, ಹಣಕಾಸಿನ ನಿರ್ವಹಣೆಯ ಬಗ್ಗೆ ಸಾಮಾನ್ಯ ತಿಳುವಳಿಕೆಯನ್ನು ಸ್ವಯಂ ಸೇವಾ ಸಂಸ್ಥೆಗಳಿಗೆ ನೀಡಬೇಕಾಗಿದೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡದೇ ಇದ್ದುದರಿಂದ ಅನಕ್ಷರತೆ ಹೆಚ್ಚಿದೆ. ಪ್ರಸ್ತುತ ಸಂದರ್ಶನಕ್ಕೆ ಒಳಪಡಿಸಿಕೊಂಡ ಸಂಘದ ಸದಸ್ಯರಲ್ಲಿ ಶೇಕಡ ೩೮ ರಷ್ಟು ಸದಸ್ಯರು ಮಾತ್ರ ಅಕ್ಷರಸ್ಥರಾಗಿದ್ದರೆ, ಶೇಕಡ ೬೨ ರಷ್ಟು ಅನಕ್ಷರಸ್ಥರಾಗಿದ್ದಾರೆ. ಸಂದರ್ಶನಕ್ಕೆ ಒಳಗಾದ ಸದಸ್ಯರ ಶೈಕ್ಷಣಿಕ ಅರ್ಹತೆಯನ್ನು ಕೋಷ್ಟಕ ೪.೨ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೨

ಸಂಘದಲ್ಲಿನ ಅಕ್ಷರಸ್ತ ಮತ್ತು ಅನಕ್ಷರಸ್ತರ ಸಂಖ್ಯೆ

| ಕ್ರ.ಸಂ | ಗ್ರಾಮ ಪಂಚಾಯತಿ | ಅಕ್ಷರಸ್ತರು | | ಅನಕ್ಷರಸ್ತರ | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೧೫ | ೩೦ | ೩೫ | ೭೦ | ೫೦ | ೧೬.೬ |
| ೦೨ | ಮದಬಾವಿ | ೨೧ | ೪೨ | ೨೯ | ೫೮ | ೫೦ | ೧೬.೭ |
| ೦೩ | ಮುರಗುಂಡಿ | ೨೨ | ೪೪ | ೨೮ | ೫೬ | ೫೦ | ೧೬.೭ |
| ೦೪ | ಅನಂತಪುರ | ೧೯ | ೩೮ | ೩೧ | ೬೨ | ೫೦ | ೧೬.೬ |
| ೦೫ | ಶಿರಹಟ್ಟಿ | ೨೦ | ೪೦ | ೩೦ | ೬೦ | ೫೦ | ೧೬.೭ |
| ೦೬ | ತೆಲಸಂಗ | ೧೭ | ೩೪ | ೩೩ | ೬೬ | ೫೦ | ೧೬.೭ |
| ಒಟ್ಟು | | ೧೧೪ | ೩೮ | ೧೮೬ | ೬೨ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೪ ಸಂಘದ ರಚನೆ

ಮಹಿಳಾ ಸಬಲೀಕರಣಕ್ಕೆ ಸಂಘದ ರಚನೆ ಅತ್ಯಂತ ಪ್ರಮುಖವಾಗಿದೆ. ಆದರೆ ಸಂಘದ ರಚನೆಯ ಉದ್ದೇಶ ಸ್ಪಷ್ಟವಾಗಿರಬೇಕು. ಅಂದರೆ ಸಂಘಗಳನ್ನು ಉಳಿತಾಯಕ್ಕಾಗಿ ರಚಿಸಿಕೊಳ್ಳಬೇಕೆ ಅಥವಾ ಸ್ವಯಂ ಉದ್ಯೋಗ ಮಾಡಲು ರಚಿಸಿಕೊಳ್ಳಬೇಕೆ ಎನ್ನವುದು. ಪ್ರಸ್ತುತ ಸಂದರ್ಶನಕ್ಕೆ ಒಳಪಟ್ಟಿರುವ ಸಂಘಗಳು ೧೦

ರಿಂದ ೨೦ ಸದಸ್ಯರನ್ನು ಒಳಗೊಂಡು ರಚನೆಯಾಗಿವೆ. ರಚಿತವಾಗಿರುವ ಬಹುತೇಕ ಸಂಘಗಳು ಉಳಿತಾಯದಲ್ಲಿ ನಿರತವಾಗಿವೆ. ಆದರೆ ಸಂಘಗಳನ್ನು ರಚಿಸುವಾಗ ಸಂಬಂಧಪಟ್ಟ ಸಂಸ್ಥೆಗಳು ಸರಿಯಾಗಿ ಮಾರ್ಗದರ್ಶನ ಮಾಡಿರುವುದಿಲ್ಲ ಎನ್ನುವುದನ್ನು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಯಿತು. ಏಕೆಂದರೆ ಸಂದರ್ಶಿತ ಒಟ್ಟು ಸಂಘಗಳ ಸದಸ್ಯರಲ್ಲಿ ಶೇಕಡ ೩೮ ರಷ್ಟು ಸಂಘಗಳ ಸದಸ್ಯರು ಸಾಲ ಸೌಲಭ್ಯವನ್ನು ಕೊಡಿಸುತ್ತೇವೆ, ಸಂಘಗಳನ್ನು ರಚಿಸಿಕೊಳ್ಳಿ ಎಂದರು. ಅದಕ್ಕಾಗಿ ಸಂಘವನ್ನು ರಚಿಸಿಕೊಂಡಿದ್ದೇವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಶೇಕಡ ೨೦ ರಷ್ಟು ಸಂದರ್ಶಿತ ಸಂಘಗಳ ಸದಸ್ಯರು ಏನಾದರು ಉದ್ಯೋಗವನ್ನು ಮಾಡಬಹುದು, ಅದರಿಂದ ಅನುಕೂಲವಾಗುತ್ತದೆ. ಎನ್ನುವ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಅಂತಹ ಅಭಿಪ್ರಾಯವನ್ನು ವ್ಯಕಪಡಿಸಿದ ಸಂಘಗಳಲ್ಲಿ ಬಹುತೇಕ ಸಂಘಗಳ ಸದಸ್ಯರು ವಿಮೋಚನಾ ಸಂಸ್ಥೆಯಿಂದ ರಚಿತವಾದ ಸಂಘಗಳ ಸದಸ್ಯರೇ ಆಗಿದ್ದಾರೆ. ಶೇಕಡ ೩೧.೩ ರಷ್ಟು ಸಂದರ್ಶಿತ ಸಂಘಗಳ ಸದಸ್ಯರು ಉಳಿತಾಯ ಮಾಡಬಹುದು. ಅದರಿಂದ ಮನೆಯ ಸಮಸ್ಯೆಗಳನ್ನಾದರೂ ಸ್ವಲ್ಪಮಟ್ಟಿಗೆ ಪರಿಹರಿಸಿಕೊಳ್ಳಬಹುದು ಎನ್ನುವುದಕ್ಕಾಗಿ ಸಂಘವನ್ನು ರಚಿಸಿಕೊಂಡಿದ್ದೇವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಶೇಕಡ ೯.೩ ರಷ್ಟು ಸಂದರ್ಶಿತ ಸಂಘಗಳ ಸದಸ್ಯರು ಸಂಘವನ್ನು ರಚಿಸಿಕೊಂಡರೆ ಏನಾದರೂ ಮಾಡಬಹುದು ಎನ್ನುವುದಕ್ಕಾಗಿ ರಚಿಸಿಕೊಂಡಿದ್ದೇವೆ ಎನ್ನುತ್ತಾರೆ. ಅದರ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೩ ರಲ್ಲಿ ನೋಡಬಹುದು.



ಕೋಷ್ಟಕ ೪.೩

ಸಂಘವನ್ನು ರಚಿಸಿಕೊಳ್ಳಲು ಕಾರಣಗಳು

| ಕ್ರ.ಸಂ | ಗ್ರಾಮ ಪಂಚಾಯತಿ | ಉಳಿತಾಯ | | ಉದ್ಯೋಗ | | ಸಾಲಸೌಲಭ್ಯ | | ಇತರೆ | | ಒಟ್ಟು | |
|---|---|---|---|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೧೭ | ೩೪ | ೦೬ | ೧೨ | ೧೯ | ೩೮ | ೦೮ | ೧೬ | ೫೦ | ೧೬.೬ |
| ೦೨ | ಮದಬಾವಿ | ೧೩ | ೨೬ | ೦೯ | ೧೮ | ೨೨ | ೪೪ | ೦೬ | ೧೨ | ೫೦ | ೧೬.೭ |
| ೦೩ | ಮುರಗುಂಡಿ | ೧೫ | ೩೦ | ೧೧ | ೨೨ | ೨೧ | ೪೨ | ೦೩ | ೦೬ | ೫೦ | ೧೬.೭ |
| ೦೪ | ಅನಂತಪುರ | ೧೬ | ೩೨ | ೦೭ | ೧೪ | ೨೩ | ೪೬ | ೦೪ | ೦೮ | ೫೦ | ೧೬.೬ |
| ೦೫ | ಶಿರಹಟ್ಟಿ | ೧೯ | ೩೮ | ೧೦. | ೨೦ | ೨೦ | ೪೦ | ೦೧ | ೦೨ | ೫೦ | ೧೬.೭ |
| ೦೬ | ತೆಲಸಂಗ | ೧೪ | ೨೮ | ೧೧ | ೨೨ | ೧೯ | ೩೮ | ೦೬ | ೧೨ | ೫೦ | ೧೬.೭ |
| ಒಟ್ಟು | | ೯೪ | ೩೧.೩ | ೫೪ | ೧೮ | ೧೨೪ | ೪೧.೩ | ೨೮ | ೯.೩ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವ ಶೇಕಡವಾರು ಪ್ರಮಾಣವನ್ನು ನೋಡಿದಾಗ ಸಂಘವನ್ನು ರಚಿಸಲು ಜವಾಬ್ದಾರಿಯನ್ನು ಹೊತ್ತಿರುವ ಸಂಸ್ಥೆಗಳು ಸರಿಯಾದ ತಿಳುವಳಿಕೆಯನ್ನು ನೀಡಬೇಕು. ಆದರೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆ ಮತ್ತು ಸರ್ಕಾರ ಸರಿಯಾದ ನಿರ್ಧಾರವನ್ನು ಕೈಗೊಳ್ಳದಿರುವುದು ಅದಕ್ಕೆ ಪ್ರಮುಖ ಕಾರಣವಾಗಿದೆ. ಇದರಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳು, ಅಂಗನವಾಡಿ ಕಾರ್ಯಕರ್ತೆಯರಿಗೆ ಸಂಘವನ್ನು ರಚಿಸಲು ತಿಳಿಸಿವೆ. ಆದರೆ ಕಾರ್ಯಕರ್ತೆಯರು ಬಡತನ ರೇಖೆಯ ಕೆಳಗಿರುವವರನ್ನು ಒಳಗೊಂಡ ಸದಸ್ಯರಿಂದ ಕೂಡಿದ ಸಂಘಗಳನ್ನು ರಚಿಸಿರುವುದಿಲ್ಲ. ವಿವಿಧ ಜಾತಿಯವರನ್ನು ಒಳಗೊಂಡ ಒಂದೇ ಸಂಘಗಳನ್ನು ರಚಿಸಿದ್ದರೆ ಜಾತೀಯತೆಯು ಕಡಿಮೆಯಾಗುತ್ತಿತ್ತು. ಅದೇ ರೀತಿ ಬ್ಯಾಂಕುಗಳು ಮೇಲಿನ ಅಧಿಕಾರಿಗಳ ಒತ್ತಡದ ಮೇಲೆ ಸಂಘಗಳನ್ನು ರಚಿಸಿರುವುದನ್ನು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಯಿತು. ಇನ್ನು ಸ್ವಯಂ ಸೇವಾ ಸಂಸ್ಥೆಗಳು ಹಣಕಾಸಿನ ಸಹಾಯವಿಲ್ಲದೆ ಸರಿಯಾಗಿ ಸಂಘಗಳನ್ನು ನಿರ್ವಹಣೆ ಮಾಡುತ್ತಿಲ್ಲ.

## ೪.೫ ಸಂಘಗಳು ಮತ್ತು ಸಂಸ್ಥೆಗಳು

ಸಂಘಗಳ ರಚನೆಯಲ್ಲಿ ಸಂಸ್ಥೆಗಳು ಪ್ರಮುಖ ಪಾತ್ರವನ್ನು ವಹಿಸಬೇಕಾಗಿದೆ. ಅಥಣಿ ತಾಲ್ಲೂಕಿನಲ್ಲಿ ರುಪದಿ, ವಿಮೋಚನ, ಕರ್ಡ, ವಿಶ್ವೇಶ್ವರಯ್ಯ, ಟ್ರೀ, ಮದರ್ ತೆರೇಸಾ, ಸಂಸ್ಥೆಗಳು ಎಸ್.ಜಿ.ಎಸ್.ವೈ ಯೋಜನೆಯ ಅಡಿಯಲ್ಲಿ ಸಂಘಗಳನ್ನು ರಚಿಸಿವೆ. ಅದರೆ ಈ ಸಂಸ್ಥೆಗಳು ರಚಿಸಿರುವ ಸಂಘಗಳ ಸಂಖ್ಯೆ ತುಂಬಾ ಕಡಿಮೆಯಿದೆ. ಅಲ್ಲದೆ ಎಸ್.ಜಿ.ಎಸ್.ವೈ ಯೋಜನೆಯಿಂದ ಸಿಗಬೇಕಾದ ನೆರವು ಸಮಯಕ್ಕೆ ಸರಿಯಾಗಿ ಸಿಗುತ್ತಿಲ್ಲ ಎನ್ನುವುದು ಸಂಸ್ಥೆಗಳ ಅಭಿಪ್ರಾಯ. ವಿಮೋಚನಾ ಸಂಸ್ಥೆಯನ್ನು ಹೊರತು ಪಡಿಸಿದರೆ ಇತರೆ ಸಂಸ್ಥೆಗಳಿಗೆ ಯಾವುದೇ ಹಣಕಾಸಿನ ನೆರವು ದೊರೆಯದೇ ಇರುವುದರಿಂದ ಹೆಚ್ಚಿನ ಸಂಘಗಳನ್ನು ರಚಿಸಿರುವುದಿಲ್ಲ. ಬ್ಯಾಂಕುಗಳೂ ಸಹ ಸಂಘವನ್ನು ರಚಿಸಿವೆ. ಆದರೆ ಬ್ಯಾಂಕಿನ ಅಧಿಕಾರಿಗಳು ಹೆಚ್ಚಿನ ಕಾರ್ಯಭಾರದಿಂದ ಕಡಿಮೆ ಸಂಘಗಳನ್ನು ರಚಿಸಿವೆ. ಇನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯು ೧೪೪೮ ಸಂಘಗಳನ್ನು ರಚಿಸಿದೆ. ಅದೇ ರೀತಿ ಮುನ್ಸಿಪಾಲಿಟಿ ೮೯ ಸಂಘಗಳನ್ನು ರಚಿಸಿದೆ. ಅದರಂತೆ ವಿವಿಧ ಸಂಸ್ಥೆಗಳಿಂದ ಕೋಷ್ಟಕದಲ್ಲಿ ತಿಳಿಸಿರುವ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ರಚಿಸಿರುವ ಸಂಘಗಳ ಆಧಾರದ ಮೇಲೆ ಸಂದರ್ಶನಕ್ಕೆ ಒಳಪಡಿಸಿಕೊಂಡ ಸಂಘಗಳ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೪ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೪

ಸಂಘವನ್ನು ಯಾರ ಅಡಿಯಲ್ಲಿ ರಚಿಸಿಕೊಂಡಿದ್ದೀರಿ?

| ಕ್ರ.ಸಂ | ಗ್ರಾಮ ಪಂಚಾಯತಿ | ಮಕ್ಕಳ ಮತ್ತು ಮಹಿಳಾ ಇಲಾಖೆ | | ಎನ್.ಜಿ.ಓ | | ಬ್ಯಾಂಕ್ | | ಒಟ್ಟು | |
|---|---|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೨೩ | ೪೬ | ೧೪ | ೨೮ | ೧೩ | ೨೬ | ೫೦ | ೧೬.೬ |
| ೦೨ | ಮದಬಾವಿ | ೨೫ | ೫೦ | ೧೬ | ೩೨ | ೦೯ | ೧೮ | ೫೦ | ೧೬.೭ |
| ೦೩ | ಮುರಗುಂಡಿ | ೨೧ | ೨೨ | ೧೩ | ೨೬ | ೧೬ | ೩೨ | ೫೦ | ೧೬.೭ |
| ೦೪ | ಅನಂತಪುರ | ೨೫ | ೫೦ | ೧೩ | ೨೬ | ೧೨ | ೨೪ | ೫೦ | ೧೬.೬ |
| ೦೫ | ಶಿರಹಟ್ಟಿ | ೨೦ | ೪೦ | ೧೯ | ೩೮ | ೧೧ | ೨೨ | ೫೦ | ೧೬.೭ |
| ೦೬ | ತೆಲಸಂಗ | ೨೨ | ೪೪ | ೧೮ | ೩೬ | ೧೦ | ೨೦ | ೫೦ | ೧೬.೭ |
| ಒಟ್ಟು | | ೧೩೬ | ೪೫.೩ | ೯೩ | ೩೧ | ೭೧ | ೨೩.೭ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೬ ಸಂಘದ ರಚನೆಯಿಂದ ಆಗಿರುವ ಪ್ರಯೋಜನಗಳು

ಭಾರತ ಹಳ್ಳಿಗಳ ರಾಷ್ಟ್ರವಾಗಿದ್ದು, ಬಡತನ, ನಿರುದ್ಯೋಗ, ಅನಕ್ಷರತೆ, ಮೊದಲಾದ ಸಮಸ್ಯಗಳಿಂದ ಕೂಡಿದೆ. ಇಂತಹ ಸಮಸ್ಯೆಗಳು ಸಂಘಗಳ ರಚನೆಯ ನಂತರ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗುತ್ತಾ ನಡೆದಿದೆ. ಬಹಳಷ್ಟು ಸಂಘಗಳು ಇದೇ ಅಭಿಪ್ರಾಯವನ್ನು ವ್ಯಕ್ತ ಪಡಿಸಿವೆ. ಅದರಂತೆ ಸಂಘವನ್ನು ರಚಿಸುವ ಮೊದಲು ಬಹಳಷ್ಟು ಸಮಸ್ಯೆಗಳನ್ನು ಎದುರಿಸುತ್ತಿದ್ದೆವು. ಆದರೆ ಸಂಘವನ್ನು ರಚಿಸಿಕೊಂಡ ನಂತರ ಬಹಳ ಸುಧಾರಣೆಯನ್ನು ಕಂಡುಕೊಂಡಿದ್ದೇವೆ ಎನ್ನುವುದು ಸಂದರ್ಶಿತ ಸಂಘಗಳ ಸದಸ್ಯರ ಅಭಿಪ್ರಾಯವಾಗಿದೆ. ಸಂಘಗಳ ರಚನೆಯ ಮೊದಲು ಮನೆಯಲ್ಲಿನ ಅಗತ್ಯ ವಸ್ತುಗಳನ್ನು ತರಲು ಬೇರೆಯವರ ಹತ್ತಿರ ಹಣವನ್ನು ಬೇಡಬೇಕಿತ್ತು. ಆದರೆ ಸಂಘವನ್ನು ರಚಿಸಿಕೊಂಡ ನಂತರ ಮನೆಯಲ್ಲಿನ ಸಮಸ್ಯೆಗಳು ಕಡಿಮೆಯಾಗಿವೆ ಎನ್ನುವುದು ಶೇಕಡ ೪೨.೪ ರಷ್ಟು ಸಂದರ್ಶಿತ ಸಂಘಗಳ ಮಹಿಳಾ ಸದಸ್ಯರ ಅಭಿಪ್ರಾಯವಾಗಿದೆ. ಹೊಲವನ್ನು ಬಿತ್ತನೆ ಮಾಡುವಾಗ ಮತ್ತು ನಂತರ ಗೊಬ್ಬರ ಮೊದಲಾದವುಗಳಿಗೆ ಸಂಬಂಧಿಸಿದಂತೆ ಬೇರೆಯವರ ಹತ್ತಿರ ಸಾಲವನ್ನು ಪಡೆದುಕೊಳ್ಳಬೇಕಿತ್ತು. ಅದರ ಬಡ್ಡಿ ಹೆಚ್ಚಿ ಉತ್ಪಾದನೆಯಿಂದ ಬಂದ ಆದಾಯ ಉಳಿಯುತ್ತಿರಲಿಲ್ಲ ಎನ್ನುವುದು ಕೆಲವು ಸಂಘಗಳ ಅಭಿಪ್ರಾಯವಾಗಿದ್ದರೆ, ಮತ್ತೆ ಕೆಲವು ಸದಸ್ಯರು ಕೂಲಿಯು ಯಾವಾಗಲೂ ಸಿಗುವುದಿಲ್ಲ. ಸಿಗದೇ ಇದ್ದ ಸಮಯದಲ್ಲಿ ಅನಿವಾರ್ಯವಾಗಿ ಸಾಲವನ್ನು ಮಾಡಬೇಕಿತ್ತು. ಆದರೆ ಸಂಘಗಳನ್ನು ರಚಿಸಿಕೊಂಡ ನಂತರ ಆರ್ಥಿಕವಾಗಿ ಹಣಕಾಸಿನ ಸಮಸ್ಯೆಗಳು

ನಿವಾರಣೆಯಾಗುತ್ತಿವೆ. ಶಾಲೆಗೆ ಮಕ್ಕಳನ್ನು ಕಳುಹಿಸಲು, ಆಸ್ಪತ್ರೆ ಖರ್ಚನ್ನು ನೀಗಿಸಿಕೊಳ್ಳಲು ಸಾಧ್ಯವಾಗಿದೆ ಎಂದು ಶೇಕಡ ೧೯.೩ ರಷ್ಟು ಪ್ರಮಾಣ ಅನಂತಪುರ, ತೆಲಸಂಗ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಸಂಘಗಳ ಸದಸ್ಯರ ಅಭಿಪ್ರಾಯವಾಗಿದೆ. ಅಥಣಿಯು ಅರೆ ನೀರಾವರಿ ಪ್ರದೇಶವಾಗಿದ್ದು ಅನಂತಪುರ, ತೆಲಸಂಗ, ಮದಬಾವಿ ಗ್ರಾಮಗಳು ಮಳೆಯನ್ನೇ ಆಶ್ರಯಿಸಿವೆ. ಈ ಗ್ರಾಮಗಳಲ್ಲಿನ ಸಂಘದ ಸದಸ್ಯರಿಗೆ ಬಹಳ ಪ್ರಯೋಜನವಾಗಿದೆ. ಸಂಘದಲ್ಲಿ ಮಹಿಳೆಯರು ಸೇರಿ ಉಳಿತಾಯ ಮಾಡಲು ಪ್ರಾರಂಭಿಸಿದ ನಂತರ ಪುರುಷ ಸಮಾಜವು ಸಂಘದಿಂದ ಆಗುವ ಲಾಭಗಳನ್ನು ಅರಿತು ನಂತರ ಮಹಿಳೆಯರಿಗೆ ಎಲ್ಲಿಲ್ಲದ ಗೌರವವನ್ನು ನೀಡುತ್ತಿದ್ದಾರೆ. ಶೇಕಡ ೬.೩ ರಷ್ಟು ಅದನ್ನು ಒಪ್ಪಿಕೊಂಡಿದ್ದಾರೆ.

ಅದರಂತೆ ಸಂಘದ ರಚನೆಯಿಂದ ಆಗಿರುವ ಪ್ರಯೋಜನಕ್ಕೆ ಸಂಬಂಧಿಸಿದಂತೆ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೫ ರಲ್ಲಿ ತಿಳಿಸಲಾಗಿದೆ. ಅದರಂತೆ ಶೇಕಡ ೪೨.೪ ರಷ್ಟು ಸದಸ್ಯರು ಮನೆಯಲ್ಲಿನ ಸಣ್ಣಪುಟ್ಟ ಸಮಸ್ಯೆಗಳಿಗೆ ತಕ್ಷಣ ಸಹಾಯವಾಗುತ್ತದೆ. ಶೇಕಡ ೧೯.೩ ರಷ್ಟು ಸದಸ್ಯರು ಆರ್ಥಿಕ ಸಮಸ್ಯೆಗಳು ಕಡಿಮೆಯಾಗಿವೆ. ಬಿತ್ತನೆಯ ಸಮಯದಲ್ಲಿ, ಮಕ್ಕಳನ್ನು ಶಾಲೆಗೆ ಸೇರಿಸುವ ಸಮಯದಲ್ಲಿ ಹೆಚ್ಚು ಉಪಯೋಗವಾಗಿದೆ. ಚಿಕ್ಕ ಅಂಗಡಿಯನ್ನು ಹಾಕಿಕೊಂಡಿರುವುದರಿಂದ, ಬಟ್ಟೆ ವ್ಯಾಪಾರ ಮಾಡುತ್ತಿರುವುದರಿಂದ ಮನೆಯಲ್ಲಿನ ಆರ್ಥಿಕ ಸಮಸ್ಯೆ ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿವೆ. ಶೇಕಡ ೩೨ ರಷ್ಟು ಹಿಂದುಳಿದ ವರ್ಗಗಳಿಂದ ಬಂದಿರುವ ಸಂಘಗಳು ಆರ್ಥಿಕ ಚಟುವಟಿಕೆಗಳನ್ನು ಮಾಡುತ್ತಿರುವುದರಿಂದ ಸಮಾಜದಲ್ಲಿ ಸುಧಾರಣೆಯನ್ನು ಕಾಣಲು ಸಾಧ್ಯವಾಗಿದೆ. ನಾಲ್ಕು ಮಂದಿ ಹೌದು ಎನ್ನುವಂತೆ ಬದುಕಲು ಸಾಧ್ಯವಾಗಿದೆ. ಸಂಘವನ್ನು ರಚಿಸಿದ ಸಮಯದಲ್ಲಿ ತರಬೇತಿ ನೀಡುತ್ತಿರುವಾಗ ಮುಂದುವರಿದ ಜನಾಂಗ ನಮ್ಮ ಜೊತೆ ಕೂರುತ್ತಿರಲಿಲ್ಲ. ಏನೇ ಮಾಡಿದರೂ ಅವರೇನು ಉದ್ಧಾರವಾಗುತ್ತಾರೆ ಎನ್ನುವ ತಾತ್ಸರದ ಮಾತುಗಳನ್ನು ಆಡುತ್ತಿದ್ದರು. ಈಗ ಅಂತಹ ಮಾತುಗಳು ಕಡಿಮೆಯಾಗಿವೆ. ಇನ್ನೊಬ್ಬರನ್ನು ಅವಲಂಬಿಸುವುದೂ ನಿಂತು ಹೋಗಿದೆ. ಇದರಿಂದ ಸಮಾಜದಲ್ಲಿ ಸ್ವಲ್ಪಮಟ್ಟಿಗೆ ಗೌರವ ದೊರೆಯುತ್ತಿದೆ ಎನ್ನುವ ಅಭಿಪ್ರಾಯವನ್ನು ಶೇಕಡ ೬.೩ ರಷ್ಟು ಸಂದರ್ಶಿತ ಸದಸ್ಯರು ವ್ಯಕ್ತಪಡಿಸಿವೆ.

ಕೋಷ್ಠಕ ೪.೫

ಸಂಘದ ರಚನೆಯಿಂದ ಆಗಿರುವ ಪ್ರಯೋಜನಗಳು

| ಕ್ರ.ಸಂ | ಪ್ರಯೋಜನಗಳು | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ಕೌಟುಂಬಿಕ ಸಮಸ್ಯೆಗಳ ನಿವಾರಣೆ | ೧೨೭ | ೪೨.೪ |
| ೦೨ | ಆರ್ಥಿಕ ಸಮಸ್ಯೆಗಳ ನಿವಾರಣೆ | ೫೮ | ೧೯.೩ |
| ೦೩ | ಸಾಮಾಜಿ ಸಮಸ್ಯೆಗಳ ನಿವಾರಣೆ | ೯೬ | ೩೨ |
| ೦೪ | ಸಮಾಜದಲ್ಲಿ ಗೌರವ | ೧೯ | ೬.೩ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೬ ಉಳಿತಾಯ

ಸಂಘದ ಬೆಳವಣಿಗೆಯು ಉತ್ತಮವಾಗಿರಬೇಕಾದರೆ, ಬ್ಯಾಂಕುಗಳು ಸಾಲವನ್ನು ನೀಡಬೇಕಾದರೆ ಸಮಯಕ್ಕೆ ಸರಿಯಾಗಿ ಸಕಾಲಕ್ಕೆ ಸಂಘದಲ್ಲಿ ಬಹುಮತದ ಮೇಲೆ ಉಳಿತಾಯ ಮಾಡಲು ನಿಗದಿಗೊಳಿಸಿಕೊಂಡ ದಿನದಂದು ಉಳಿತಾಯವನ್ನು ಮಾಡಬೇಕು. ಇದಕ್ಕೆ ಸಂಬಂಧಿಸಿದಂತೆ ನೋಡಿದಾಗ ಶೇಕಡ ೭೩.೩ ರಷ್ಟು ಸದಸ್ಯರು ವಾರಕ್ಕೆ ಒಂದು ಬಾರಿ ೧೦ ರಿಂದ ೧೫ ರೂ.ಗಳವರೆಗೆ ಉಳಿತಾಯ ಮಾಡುತ್ತವೆ. ಶೇಕಡ ೨೩ ರಷ್ಟು ೧೫ ದಿನಕ್ಕೆ ಒಂದು ಬಾರಿ ಉಳಿತಾಯವನ್ನು ಮಾಡುತ್ತವೆ. ಶೇಕಡ ೩.೭ ರಷ್ಟು ಸಂಘಗಳು ಕೈಯಲ್ಲಿ ಹಣವಿದ್ದಾಗ ಸಭೆ ಸೇರುತ್ತೇವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿವೆ. ಆದರೆ ತೆಲಸಂಗದ ದಾನಮ್ಮ, ಮದಬಾವಿ ಗ್ರಾಮ ಪಂಚಾಯತಿಯಲ್ಲಿ ಬರುವ ಸಿದ್ದೇಶ್ವರ, ಶಿವಶಕ್ತಿ. ಅನಂತಪುರದ ನೀಲಾಂಬಿಕ. ಮುರುಗುಂಡಿಯ ಅಕ್ಕಮಹಾದೇವಿ, ಬಸವೇಶ್ವರ ಸಂಘಗಳ ಸದಸ್ಯರಲ್ಲಿ ಕೆಲವು ಸದಸ್ಯರು ಸರಿಯಾಗಿ ಉಳಿತಾಯ ಮಾಡುವುದಿಲ್ಲ ಎನ್ನುವುದು ಕಂಡುಬಂದಿತು. ಏಕೆಂದರೆ ಈ ಸಂಘಗಳು ಗ್ರೇಡಿಂಗ್‌ಗೆ ಒಳಪಟ್ಟಿಲ್ಲ. ಸದಸ್ಯರ ನಡುವೆ ಹೊಂದಾಣಿಕೆ ಇಲ್ಲದಿರುವುದರಿಂದ ಇಂತಹ ಸಮಸ್ಯೆ ಉಂಟಾಗಿದೆ. ಆದರೆ ಸಂಘದ ಉಳಿತಾಯದಿಂದ ಹೆಚ್ಚು ಸಂಘಗಳು ಪ್ರೇರೇಪಿತವಾಗಿದ್ದು, ಉಳಿತಾಯದಲ್ಲಿ ಹೆಚ್ಚು ಹೆಚ್ಚು ಆಸಕ್ತಿಯನ್ನ ಹೊಂದಿರುವುದನ್ನು ಸಂದರ್ಶನದಲ್ಲಿ ಕಂಡುಕೊಳ್ಳಲಾಯಿತು. ಸಂಘದಲ್ಲಿನ ಉಳಿತಾಯದ ವಿಧಾನಗಳನ್ನು ಕೋಷ್ಟಕ ೪.೬ ರಲ್ಲಿ ತಿಳಿಸಲಾಗಿದೆ.

ಅದರಂತೆ ಶೇಕಡ ೭೩.೩ ರಷ್ಟು ಸಂಘಗಳು ವಾರಕ್ಕೆ ಒಂದು ಬಾರಿ ನಿಗಧಿ ಪಡಿಸಿದ ಪ್ರಮಾಣದಲ್ಲಿ ಉಳಿತಾಯ ಮಾಡುತ್ತಿದ್ದರೆ, ಶೇಕಡ ೨೩ ರಷ್ಟು ಸಂಘಗಳ ಸದಸ್ಯರು ಹದಿನೈದು ದಿನಕ್ಕೆ ಒಂದು ಬಾರಿ ಉಳಿತಾಯ ಮಾಡುತ್ತೇವೆ ಎಂದು ಒಪ್ಪಿಕೊಂಡರೆ, ಶೇಕಡ ೩.೭ ರಷ್ಟು ಸಂಘದ ಸದಸ್ಯರು ತಮ್ಮ ಜೀವನವು ಕೂಲಿಯನ್ನೇ ಅವಲಂಬಿಸಿರುವುದರಿಂದ ಮನೆಯ ನಿರ್ವಹಣೆಯನ್ನು ಮಾಡುತ್ತಾ ಉಳಿತಾಯವನ್ನೂ ಮಾಡಲು ಆಗುತ್ತಿಲ್ಲ ಆದ್ದರಿಂದ ಎಲ್ಲರಲ್ಲಿ ಹಣವಿದ್ದಾಗ ಸಭೆ ಸೇರಿ ಉಳಿತಾಯ ಮಾಡುತ್ತೇವೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿವೆ.

ಕೋಷ್ಟಕ ೪.೬

ಸಂಘದಲ್ಲಿ ಉಳಿತಾಯದ ವಿಧಾನಗಳು

| ಕ್ರ.ಸಂ | ಸಂಘದಲ್ಲಿ ಉಳಿತಾಯದ ವಿಧಾನಗಳು | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ವಾರಕ್ಕೆ ಒಂದು ಬಾರಿ | ೨೨೦ | ೭೩.೩ |
| ೦೨ | ೧೫ ದಿನಕ್ಕೆ ಒಂದು ಬಾರಿ | ೬೯ | ೨೩ |
| ೦೩ | ತಿಂಗಳಿಗೆ ಒಂದು ಬಾರಿ | – | – |
| ೦೪ | ಸಭೆ ಸೇರಬೇಕೆಂದಾಗ | ೧೧ | ೩.೭ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೮ ಸಂಘದ ಸದಸ್ಯರ ಆದಾಯ

ಸಂಘಗಳನ್ನು ರಚಿಸಿದ ಮಾತ್ರಕ್ಕೆ ಆದಾಯಗಳಿಸದಿದ್ದರೆ ಸಂಘದ ಬೆಳವಣಿಗೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಆದಾಯ ಗಳಿಸುವತ್ತ ಗಮನ ಹರಿಸಬೇಕು. ರಚಿತವಾಗಿರುವ ಸಂಘಗಳ ಪ್ರತಿಯೊಬ್ಬ ಸದಸ್ಯಳು ೧೦ ರಿಂದ ೧೫ ರೂ.ಗಳನ್ನು ಮಾತ್ರ ಉಳಿತಾಯ ಮಾಡಬಲ್ಲವಳಾಗಿದ್ದಾಳೆ. ಈ ಉಳಿತಾಯದ ಹಣವನ್ನು ಸಂಘದ ಸದಸ್ಯರಿಗೆ ೨ ರೂ.ಗಳ ಬಡ್ಡಿದರದಲ್ಲಿ ಸಾಲವನ್ನು ನೀಡುತ್ತಾರೆ. ಇದು ಸಂಘದ ಪ್ರಾರಂಭದಲ್ಲಿ ಬರುವ ಆದಾಯವಾಗಿರುತ್ತದೆ. ಏಕೆಂದರೆ ಸಂಘದ ಉಳಿತಾಯವು ಸರಿಯಾಗಿ ಮಾಡುತ್ತಾ, ಬ್ಯಾಂಕಿಗೆ ಸಕಾಲಕ್ಕೆ ತುಂಬುತ್ತಾ ಹೋದನಂತರ ಸಂಘವನ್ನು ಗ್ರೇಡ್ ಮಾಡಿದ ಮೇಲೆ ಬ್ಯಾಂಕುಗಳು ಉಳಿತಾಯಕ್ಕೆ ಅನುಗುಣವಾಗಿ ಸಾಲವನ್ನು ನೀಡುತ್ತವೆ. ಅದೇ ರೀತಿ ಎಸ್.ಜಿ.ಎಸ್.ವೈ. ಯೋಜನೆಯ ಅಡಿಯಲ್ಲಿ ರಚಿತಾಗುವ ಸಂಘಗಳಿಗೂ ಉಳಿತಾಯದ ಹಣ ೧೦,೦೦೦ ಆದ ನಂತರವೇ ೫,೦೦೦ ಸುತ್ತು ನಿಧಿಯನ್ನು

ನೀಡಲಾಗುತ್ತದೆ. ಇದರಿಂದ ಪ್ರಾರಂಭದಲ್ಲಿ ಸಂಘದ ಸದಸ್ಯರ ತಿಂಗಳ ಆದಾಯ ತುಂಬಾ ಕಡಿಮೆ ಇರುತ್ತದೆ. ಸಂಘ ರಚನೆಯಾಗಿ ೬ ತಿಂಗಳ ನಂತರ ಅವುಗಳ ಸದಸ್ಯರ ಆದಾಯದಲ್ಲಿ ಏರಿಕೆ ಕಂಡುಬರುತ್ತದೆ. ಆದರೆ ಸಂಘದ ಮೂಲಕ ಮತ್ತು ಬ್ಯಾಂಕುಗಳ ಮೂಲಕ ಪಡೆದ ಸಾಲವನ್ನು ಉತ್ಪಾದನೆಯಲ್ಲಿ ತೊಡಗಿಸಿದರೆ ಮಾತ್ರ ಅಂತಹ ಸದಸ್ಯರ ಆದಾಯ ಹೆಚ್ಚಾಗಬಲ್ಲದು. ಅಂತಹ ಯಾವುದೇ ಆದಾಯವಿಲ್ಲವೆಂದು ಒಪ್ಪಿಕೊಂಡ ಸದಸ್ಯರ ಪ್ರಮಾಣ ಸಂಘವನ್ನು ಸೇರಿದ ಮೊದಲು ಶೇಕಡ ೯೧ ರಷ್ಟಿದ್ದರೆ, ಸಂಘವನ್ನು ಸೇರಿದ ನಂತರ ಆ ಪ್ರಮಾಣ ಕೇವಲ ಶೇಕಡ ೧.೭ ರಷ್ಟಾಗಿದೆ. ಅದನ್ನು ಕೋಷ್ಟಕ ೪.೭ ರಲ್ಲಿ ನೋಡಬಹುದು.

ಕೋಷ್ಟಕ ೪.೭

ಸಂಘವನ್ನು ಸೇರಿದ ಮೊದಲು ಮತ್ತು ನಂತರ ಸದಸ್ಯರ ತಿಂಗಳ ಆದಾಯ

| ಕ್ರ.ಸಂ | ತಿಂಗಳ ಆದಾಯ. ರೂ.ಗಳಲ್ಲಿ | ಸಂಘವನ್ನು ಸೇರಿದ ಮೊದಲು | | ಸಂಘವನ್ನು ಸೇರಿದ ನಂತರ | |
|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ೧೦೦೦ಕ್ಕಿಂತ ಕಡಿಮೆ | ೧೦ | ೩.೩ | ೧೫೭ | ೫೨.೩ |
| ೦೨ | ೧೦೦೦-೨೦೦೦ | ೦೨ | ೦.೭ | ೨೧ | ೭.೦ |
| ೦೩ | ೨೦೦೦-೩೦೦೦ | ೦೩ | ೧.೦ | ೨೫ | ೮.೩ |
| ೦೪ | ೩೦೦೦-೪೦೦೦ | ೦೪ | ೧.೩ | ೧೭ | ೫.೭ |
| ೦೫ | ೪೦೦೦-೫೦೦೦ | ೦೨ | ೦.೭ | ೧೯ | ೬.೩ |
| ೦೬ | ೫೦೦೦-೬೦೦೦ | ೦೪ | ೧.೩ | ೧೩ | ೪.೩ |
| ೦೭ | ೬೦೦೦ ಮೇಲ್ಪಟ್ಟು | ೦೨ | ೦.೭ | ೪೩ | ೧೪.೩ |
| ೦೮ | ಏನೂ ಆದಾಯವಿಲ್ಲ | ೨೭೩ | ೯೧ | ೦೫ | ೧.೭ |
| ಒಟ್ಟು | | ೩೦೦ | ೧೦೦ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೯ ಕೌಟುಂಬಿಕ ವೆಚ್ಚ

ಕೃಷಿಯನ್ನೇ ಆಶ್ರಯಿಸಿ ಬದುಕುವ ಬಹಳಷ್ಟು ಗ್ರಾಮೀಣ ಮಹಿಳೆಯರು ಕೃಷಿ ಚಟುವಟಿಕೆಯ ಸಮಯದಲ್ಲಿ ಮಾತ್ರ ಮನೆಯ ನಿರ್ವಹಣೆಗೆ ಯಾವುದೇ ಸಮಸ್ಯೆಯಾಗುವುದಿಲ್ಲ. ಈ ನಿಟ್ಟಿನಲ್ಲಿ ನೋಡಿದಾಗ ಸಂಘಗಳ ರಚನೆ ವರದಾನವಾಗಿದೆ ಎಂದೇ ಹೇಳಬಹುದು. ಏಕೆಂದರೆ ಸಂಘದ ರಚನೆಯ ನಂತರ

ತಕ್ಷಣವೇ ಸಹಾಯವಾಗುತ್ತದೆ. ಮತ್ತೊಂದು ಕಡೆ ಸಂಘದಲ್ಲಿನ ಉಳಿತಾಯವು ಬೆಳೆಯುತ್ತದೆ ಎನ್ನುವುದು ಸಂಘದ ಸದಸ್ಯರ ಅಭಿಪ್ರಾಯವಾಗಿದೆ. ಸಂಘದ ಸದಸ್ಯತ್ವವನ್ನು ಪಡೆದುಕೊಂಡ ನಂತರ ಸದಸ್ಯರ ಕುಟುಂಬದ ವೆಚ್ಚದಲ್ಲಿಯು ಹೆಚ್ಚಳವಾಗಿರುವುದನ್ನು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಯಿತು. ಕೆಲವು ಸದಸ್ಯರು ಸಂಘವನ್ನು ಸೇರಿದ ನಂತರವೂ ಕುಟುಂಬದ ವೆಚ್ಚದಲ್ಲಿ ಹೆಚ್ಚಳವನ್ನು ಮಾಡಿಕೊಂಡಿರುವುದಿಲ್ಲ. ಅದು ೧೦೦ ರೂಗಳಿಗಿಂತ ಕಡಿಮೆ ಇರುವವರ ಪ್ರಮಾಣ ಶೇಕಡ ೨.೩ ರಷ್ಟಿದೆ ಮತ್ತು ೭೦೦ ಕ್ಕಿಂತ ಮೇಲ್ಪಟ್ಟು ವೆಚ್ಚ ಮಾಡುವವರ ಪ್ರಮಾಣ ೫೨.೩ ರಷ್ಟಿದೆ. ಆದರೆ ಅದು ಯಾವಾಗಲೂ ಹೆಚ್ಚಿರದೆ ಹಬ್ಬ, ಆಸ್ಪತ್ರೆಯ ಖರ್ಚಿನ ಸಮಯದಲ್ಲಿ ಮಾತ್ರ ಹೆಚ್ಚಾಗುತ್ತದೆ ಎನ್ನವುದು ಒಟ್ಟು ಸದಸ್ಯರ ಅಭಿಪ್ರಾಯವಾಗಿದೆ. ಸಂಘವನ್ನು ಸೇರುವುದಕ್ಕಿಂತ ಮೊದಲು ಮತ್ತು ನಂತರದ ಕುಟುಂಬದ ವೆಚ್ಚದ ಪ್ರಮಾಣವನ್ನು ಕೋಷ್ಟಕ ೪.೮ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೮

ಸಂಘವನ್ನು ಸೇರಿದ ಮೊದಲು ಮತು ನಂತರದ ತಿಂಗಳ ಕುಟುಂಬದ ವೆಚ್ಚ

| ಕ್ರ.ಸಂ | ತಿಂಗಳ ಆದಾಯ. ರೂ.ಗಳಲ್ಲಿ | ಸಂಘವನ್ನು ಸೇರಿದ ಮೊದಲು | | ಸಂಘವನ್ನು ಸೇರಿದ ನಂತರ | |
|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ೧೦೦ಕ್ಕಿಂತ ಕಡಿಮೆ | ೧೦ | ೩.೩ | ೦೭ | ೨.೩ |
| ೦೨ | ೧೦೦-೨೦೦ | ೦೨ | ೦.೭ | ೨೧ | ೦೭ |
| ೦೩ | ೨೦೦-೩೦೦ | ೦೩ | ೦೧ | ೨೫ | ೮.೩ |
| ೦೪ | ೩೦೦-೪೦೦ | ೦೪ | ೧.೩ | ೧೭ | ೫.೭ |
| ೦೫ | ೪೦೦-೫೦೦ | ೦೨ | ೦.೭ | ೧೯ | ೬.೩ |
| ೦೬ | ೫೦೦-೬೦೦ | ೦೪ | ೧.೩ | ೧೩ | ೪.೩ |
| ೦೭ | ೬೦೦-೭೦೦ | ೦೨ | ೦.೭ | ೦೫ | ೧.೭ |
| ೦೮ | ೭೦೦ ಮೇಲ್ಪಟ್ಟು | ೨೭೩ | ೯೧ | ೧೫೭ | ೫೨.೩ |
| ಒಟ್ಟು | | ೩೦೦ | ೧೦೦ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

ಸಂಘದ ಸದಸ್ಯರ ಸಂಘದಲ್ಲಿನ ಆದಾಯ ಮತ್ತು ವೆಚ್ಚವನ್ನು ನೋಡಿದಾಗ ಆದಾಯಕ್ಕಿಂತ ವೆಚ್ಚವೇ ಹೆಚ್ಚಿರುವುದು ಕಂಡುಬರುತ್ತದೆ. ಅದನ್ನು ಗ್ರಾಫ್ ೪.೯ ರಲ್ಲಿ ತಿಳಿಸಲಾಗಿದೆ.

ಗ್ರಾಫ್ ೪.೯

ಸಂಘದ ಸದಸ್ಯರ ತಿಂಗಳ ಆದಾಯ ಮತ್ತು ವೆಚ್ಚ




ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿಯಂತೆ ರೂಪಿಸಲಾಗಿದೆ.

## ೪.೧೦ ತರಬೇತಿ

ಮಹಿಳೆಯರು ಸಬಲೀಕರಣ ಹೊಂದಬೇಕಾದರೆ ಸಂಘಗಳನ್ನು ಬಲಿಷ್ಠಗೊಳಿಸಬೇಕು. ಅದಕ್ಕಾಗಿ ಉಳಿತಾಯ, ಉದ್ಯೋಗದಲ್ಲಿ ಪರಿಪೂರ್ಣವಾಗಿ ತೊಡಗಿಸಿಕೊಳ್ಳುವಂತೆ ಮಾಡಬೇಕು. ಹೀಗೆ ಮಾಡಬೇಕಾದರೆ ರಚಿತವಾದ ಸಂಘದ ಸದಸ್ಯರಿಗೆ ಹಂತ ಹಂತವಾಗಿ ಉಳಿತಾಯ, ದಾಖಲಾತಿಗಳ ನಿರ್ವಹಣೆ, ಸಾಲ ನೀಡುವ ವಿಧಾನಗಳು ಮತ್ತು ಸಾಲದ ನಿರ್ವಹಣೆ, ಉದ್ಯೋಗವನ್ನು ಕೈಗೊಳ್ಳುವುದು, ಉತ್ಪಾದಿತ ವಸ್ತುಗಳ ಮಾರಾಟ ವಿಧಾನಗಳು. ಸಾಲ ಸೌಲಭ್ಯಗಳು ದೊರೆಯುವ ಮೂಲಗಳು ಹಾಗೂ ಬ್ಯಾಂಕುಗಳಲ್ಲಿ ವ್ಯವಹಾರ ಮಾಡುವುದರ ಬಗ್ಗೆ ತರಬೇತಿಯನ್ನು ನೀಡಬೇಕು. ಇದಕ್ಕೆ ಸಂಬಂಧಿಸಿದಂತೆ ಶೇಕಡ ೨೨.೭ ರಷ್ಟು ಸಂಘಗಳು ಉಳಿತಾಯದ ಬಗ್ಗೆ ತರಬೇತಿಯನ್ನು ಪಡೆದುಕೊಂಡಿವೆ. ಶೇಕಡ ೨೩ ರಷ್ಟು ದಾಖಲಾತಿಯ ಕುರಿತು ತರಬೇತಿಯನ್ನು ಪಡೆದುಕೊಂಡಿವೆ. ಶೇಕಡ ೧೯.೭ ರಷ್ಟು ಸಂಘದ ಸದಸ್ಯರು ಸಾಲದ ನಿರ್ವಹಣೆಯ ಮೇಲಿ ತರಬೇತಿಯನ್ನು ಪಡೆದುಕೊಂಡಿವೆ. ಆದರೆ ಶೇಕಡ ೫೫.೮ ರಷ್ಟು ಸಂಘಗಳು ಉದ್ಯೋಗ ಮತ್ತು ಮಾರಾಟದ ಮೇಲಿ ಹಾಗೂ ಶೇಕಡ ೪೪.೨ ರಷ್ಟು ಸಂಘಗಳು ಬ್ಯಾಂಕ್ ವ್ಯವಹಾರದ ಮೇಲಿ ಯಾವುದೇ ರೀತಿಯ ತರಬೇತಿಯನ್ನು ಪಡದುಕೊಂಡಿರುವುದಿಲ್ಲ. ಪ್ರಸ್ತುತ ಕ್ಷೇತ್ರಾಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗ್ರಾಮ ಪಂಚಾಯತಿಗಳನ್ನು ಬಿಟ್ಟು ಇತರೆ ಪ್ರದೇಶಗಳಲ್ಲಿನ ಸಂಘಗಳಿಗೆ ರುಪದಿ ಸಂಸ್ಥೆಯು ಕರ್ನಾಟಕ ಸಣ್ಣ ಕೈಗಾರಿಕಾ ಇಲಾಖೆ, ಧಾರವಾಡ ಇದರ ವತಿಯಿಂದ ೧೩೦ ಸದಸ್ಯರಿಗೆ ಫಿನಾಯಿಲ್, ಸೋಪ್ ತಯಾರಿಕೆ, ಕ್ಯಾಂಡಲ್ ತಯಾರಿಕೆ, ಅಗರ ಬತ್ತಿ ತಯಾರಿಕೆ

ಹೀಗೆ ಒಟ್ಟು ೪೦ ವಸ್ತುಗಳ ಮೇಲೆ ತರಬೇತಿಯನ್ನು ಕೊಡಿಸಿದೆ. ಆದರೆ ತರಬೇತಿಯನ್ನು ಕೊಡಿಸಿದೆಯೇ ವಿನ: ಉತ್ಪಾದನೆಯನ್ನು ಕೈಗೊಳ್ಳಲು ಸಂಘಗಳಿಗೆ ಪ್ರೋತ್ಸಾಹಿಸುತ್ತಿಲ್ಲ. ಸಂಘದ ಸದಸ್ಯರು ಉತ್ಪಾದನೆಯನ್ನು ಮಾಡುತ್ತೇವೆ. ಆದರೆ ಉತ್ಪಾದಿತ ವಸ್ತುಗಳನ್ನು ಮಾರಾಟ ಮಾಡಿಕೊಡಬೇಕು ಎನ್ನುತ್ತಿವೆ. ಆದರೆ ಎಲ್ಲವನ್ನು ಮಾಡಲು ಸಂಸ್ಥೆಗೆ ಯಾವುದೇ ಮೂಲಗಳಿಂದ ಆದಾಯವಿಲ್ಲ ಎನ್ನುವುದು ಈ ಸಂಸ್ಥೆಯ ಅಭಿಪ್ರಾಯವಾಗಿದೆ.

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಗೆ ತರಬೇತಿಗಾಗಿ ಸರ್ಕಾರದಿಂದ ಪ್ರತಿ ಸದಸ್ಯರಿಗೆ ೩೦ ರೂ.ಗಳನ್ನು ತರಬೇತಿ ನೀಡುವವರಿಗೆ ೨೦೦ ರೂ.ಗಳಂತೆ ಒಟ್ಟು ಸಂಘಗಳಿಗೆ ತರಬೇತಿಯನ್ನು ಕೊಡಲು ಹಣವನ್ನು ನೀಡಿರುತ್ತದೆ. ಆದರೆ ಈ ಇಲಾಖೆಯಲ್ಲಿನ ಕೆಲವು ಅಧಿಕಾರಿಗಳು ಪ್ರತಿ ಸದಸ್ಯರಿಗೆ ಪ್ರಯಾಣ ಮತ್ತು ಊಟದ ವೆಚ್ಚಕ್ಕಾಗಿ ನೀಡಿರುವ ಹಣವನ್ನು ತರಬೇತಿಗೆ ಹಾಜರಾದ ಸದಸ್ಯರಿಗೆ ನೀಡಿಲ್ಲ. ಅಲ್ಲದೆ, ಕೇವಲ ಉಳಿತಾಯದ ಮೇಲೆ ತರಬೇತಿಯನ್ನು ನೀಡಿದೆಯೆ ವಿನ: ಇತರೆ ಉದ್ಯೋಗ, ಮಾರುಕಟ್ಟೆ, ಸಾಮಾಜಿಕ ವ್ಯವಸ್ಥೆಯ ಮೇಲೆ ತರಬೇತಿ ನೀಡಲು ಬಂದ ಹಣವನ್ನು ತರಬೇತಿಗೆ ಬಳಸದೆ ಕುಳಿತಲ್ಲಿಯೇ ಸಂಘದ ಸದಸ್ಯರಿಂದ ಸಹಿ ಪಡೆದುಕೊಂಡು ತರಬೇತಿಯನ್ನು ನೀಡಿಲ್ಲ. ಅಂಗನವಾಡಿ ಕಾರ್ಯಕರ್ತೆಯರು ಈ ಇಲಾಖೆಯ ನಿಯಂತ್ರಣದ ಅಡಿಯಲ್ಲಿ ಇರುವುದರಿಂದ ಅಧಿಕಾರಿಗಳು ಹೇಳಿದಂತೆ ಕೇಳಬೇಕಾಗಿದೆ. ಆದ್ದರಿಂದ ಅವರೂ ಸಹ ಸರಿಯಾದ ಮಾಹಿತಿಯನ್ನು ನೀಡುವುದಿಲ್ಲ ಎನ್ನವುದು ಬಹುತೇಕ ಸಂಘಗಳ ಸದಸ್ಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಅಥಣಿ ತಾಲ್ಲೂಕಿನಲ್ಲಿ ಚರ್ಮೋದ್ಯೋಗ ಒಂದು ಪ್ರಮುಖ ವೃತ್ತಿಯಾಗಿದೆ. ಇದರ ಜೊತೆಗೆ ಕುಂಬಾರಿಕೆ, ಬುಟ್ಟಿ ಹೆಣೆಯುವುದು, ಚಿಕ್ಕ ಚಿಕ್ಕ ಎಣ್ಣೆ ಮಿಲ್ಲುಗಳು, ಕಂಬಳಿ ನೇಯುವುದು, ಇನ್ನೂ ಮೊದಲಾದ ಗೃಹೋದ್ಯೋಗ ಚಟುವಟಿಕೆಗಳು ನಡೆಯುತ್ತಿವೆ. ಇದಕ್ಕೆ ಸಂಬಂಧಿಸಿದಂತೆ ತರಬೇತಿಯನ್ನು ನೀಡಿದರೆ ಸಂಘಗಳ ಮಹಿಳಾ ಸದಸ್ಯರು ಇನ್ನೂ ಹೆಚ್ಚು ಸಬಲೀಕರಣ ಹೊಂದುತ್ತಾರೆ. ಸಂಘಕ್ಕೆ ತರಬೇತಿ ನೀಡಿರುವ ಛಾಯಾ ಪ್ರತಿಗಳನ್ನು ನೋಡಿದಾಗ ತರಬೇತಿಯು ಎಷ್ಟು ಪರಿಣಾಮಕಾರಿಯಾಗಿದೆ ಎನ್ನುವುದು ತಿಳಿಯುತ್ತದೆ. ಸಂಘಗಳಿಗೆ ತರಬೇತಿಯನ್ನು ನೀಡಿರುವ ಫೋಟೋವನ್ನು ನೋಡಿದಾಗ ತರಬೇತಿಯನ್ನು ಹೇಗೆ ನೀಡಲಾಗಿದೆ ಎನ್ನುವುದು ತಿಳಿಯುತ್ತದೆ. ಏಕೆಂದರೆ ಸಂಘದ ಸದಸ್ಯರು ಅನಕ್ಷರಸ್ಥರಾಗಿರುವುದರಿಂದ ವಿವಿಧ ದೃಶ್ಯ ಮಾಧ್ಯಮಗಳ ಮೂಲಕ ತರಬೇತಿಯನ್ನು ನೀಡಬೇಕು. ಅದಕ್ಕೆ ಸಂಬಂಧಿಸಿದಂತೆ ತರಬೇತಿ ವಿಧಾನಗಳನ್ನು ಕೋಷ್ಟಕ-೪.೧೦ ರಲ್ಲಿ ಕಾಣಬಹುದು.

## ಫೋಟೋ-೪.೧
## ತರಬೇತಿ ವಿಧಾನಗಳು








ಕೋಷ್ಟಕ ೪.೧೦

ಸಂಘಗಳು ಪಡೆದುಕೊಂಡಿರುವ ತರಬೇತಿ ವಿಧಾನಗಳು

| ಕ್ರ.ಸಂ | ತರಬೇತಿ ವಿಧಾನಗಳು | ತರಬೇತಿ ಪಡೆದುಕೊಂಡ ಸಂಘಗಳು | | ತರಬೇತಿ ಪಡೆದುಕೊಂಡಿರದ ಸಂಘಗಳು | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಉಳಿತಾಯ | ೬೮ | ೩೪.೭ | – | – | ೬೮ | ೨೨.೭ |
| ೦೨ | ದಾಖಲಾತಿ ನಿರ್ವಹಣೆ | ೬೯ | ೩೫.೨ | – | – | ೬೯ | ೨೩ |
| ೦೩ | ಸಾಲದ ನಿರ್ವಹಣೆ | ೫೯ | ೩೦.೧ | – | – | ೫೯ | ೧೯.೭ |
| ೦೪ | ಉದ್ಯೋಗ ಮತ್ತು ಮಾರಾಟ | – | – | ೫೮ | ೫೫.೮ | ೫೮ | ೧೯.೩ |
| ೦೫ | ಬ್ಯಾಂಕ್ ವ್ಯವಹಾರ | – | – | ೪೬ | ೪೪.೨ | ೪೬ | ೧೫.೩ |
| ಒಟ್ಟು | | ೧೯೬ | ೬೫.೩ | ೧೦೪ | ೩೪.೭ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೧ ಸಹಾಯ ಧನ

ಸಂಘಗಳು ರಚಿತವಾದ ನಂತರ ಸಂಘದ ಉಳಿತಾಯದ ಆಧಾರದ ಮೇಲೆ ಎಸ್.ಜೆ.ಎಸ್.ವೈ, ಯೋಜನೆಯ ಅಡಿಯಲ್ಲಿ ರಚಿತವಾದ ಸಂಘಗಳಿಗೆ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯ ವತಿಯಿಂದ ರಚಿತವಾದ ಬಹುತೇಕ ಸಂಘಗಳು ಸುತ್ತು ನಿಧಿಯನ್ನು ಪಡೆದುಕೊಂಡಿವೆ. ಸುತ್ತು ನಿಧಿ ಎಂದರೆ ಸಂಘದಲ್ಲಿ ಉಳಿತಾಯ ಕಡಿಮೆ ಇದ್ದಾಗ ಸಂಘದಲ್ಲಿನ ವ್ಯವಹಾರ ಚಟುವಟಿಕೆಗಳು ಸುಗಮವಾಗಲಿ ಎಂದು ಸಂಘಕ್ಕೆ ನೀಡಿದ ಹಣವನ್ನು ಸದಸ್ಯರು ಅಗತ್ಯತೆಗೆ ಅನುಗುಣವಾಗಿ ಬೇಕಾದವರು ಬಳಸಿಕೊಳ್ಳುವುದು. ನಂತರ ಬೇರೆಯವರಿಗೆ ಕೊಡುವುದು. ಆದರೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯ ವತಿಯಿಂದ ರಚಿತವಾದ ಸಂಘಗಳಿಗೆ ಸರಿಯಾಗಿ ಸುತ್ತು ನಿಧಿ ದೊರೆತಿರುವುದಿಲ್ಲ. ಅದರ ಪ್ರಮಾಣ ಶೇಕಡ ೬೦ ರಷ್ಟಿದೆ. ಈ ಸಂಸ್ಥೆಯು ಸರಿಯಾಗಿ ಗಮನ ಹರಿಸದಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ. ಆದರೆ ಸುತ್ತು ನಿಧಿಯನ್ನು ಪಡೆದು ಕೊಂಡ ಸಂಘಗಳ ಸದಸ್ಯರು ಸುತ್ತು ನಿಧಿಯನ್ನು ಕ್ರಮವಾಗಿ ಹಂಚಿಕೊಂಡಿರುವುದು ಸಂದರ್ಶನದ ಸಮಯದಲ್ಲಿ ಕಂಡುಕೊಳ್ಳಲಾಯಿತು. ಅದನ್ನು ಕೋಷ್ಟಕ ೪.೧೧ ರಲ್ಲಿ ಕಾಣಬಹುದು.

ಕೋಷ್ಟಕ ೪.೧೧

ಸಹಾಯ ಧನ ಪಡಿದುಕೊಂಡ ಸಂಘಗಳು

| ಕ್ರ.ಸಂ | ಗ್ರಾಮ ಪಂಚಾಯತಿ | ಸಹಾಯ ಧನ ಪಡೆದುಕೊಂಡ ಸಂಘಗಳು | | ಸಹಾಯ ಧನ ಪಡೆದುಕೊಳ್ಳದ ಸಂಘಗಳು | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೧೯ | ೩೮ | ೩೧ | ೬೨ | ೫೦ | ೧೬.೬ |
| ೦೨ | ಮದಬಾವಿ | ೧೬ | ೩೨ | ೩೪ | ೬೮ | ೫೦ | ೧೬.೭ |
| ೦೩ | ಮುರಗುಂಡಿ | ೨೧ | ೪೨ | ೨೯ | ೫೮ | ೫೦ | ೧೬.೭ |
| ೦೪ | ಅನಂತಪುರ | ೨೦ | ೪೦ | ೩೦ | ೬೦ | ೫೦ | ೧೬.೬ |
| ೦೫ | ಶಿರಹಟ್ಟಿ | ೨೩ | ೪೬ | ೨೭ | ೫೪ | ೫೦ | ೧೬.೭ |
| ೦೬ | ತೆಲಸಂಗ | ೨೧ | ೪೨ | ೨೯ | ೫೮ | ೫೦ | ೧೬.೭ |
| ಒಟ್ಟು | | ೧೨೦ | ೪೦ | ೧೮೦ | ೬೦ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೨ ಸಹಾಯ ಧನದ ಪ್ರಮಾಣ

ಕೋಷ್ಟಕ ೪.೧೨ ರಲ್ಲಿ ತಿಳಿಸಿರುವಂತೆ ಒಟ್ಟು ೧೨೦ ಸಂಘಗಳು ಸಹಾಯ ಧನವನ್ನು ಪಡೆದುಕೊಂಡಿವೆ. ಅದರಂತೆ ಶೇಕಡ ೨೮.೭ ರಷ್ಟು ಸಂಘಗಳು ೫೦೦೦ ಸಹಾಯ ಧನವನ್ನು ಪಡೆದುಕೊಂಡಿದ್ದರೆ, ಶೇಕಡ ೯.೩ ರಷ್ಟು ಸಂಘಗಳು ೧೦.೦೦೦ ರೂ ಸಹಾಯ ಧನವನ್ನು ಪಡೆದುಕೊಂಡಿವೆ. ಕೇವಲ ಶೇಕಡ ೨ ರಷ್ಟು ಸಂಘಗಳು ೨೫,೦೦೦ ಸಾವಿರ ಮಾತ್ರ ಸಹಾಯ ಧನವನ್ನು ಪಡೆದುಕೊಂಡಿವೆ. ಶೇಕಡ ೬೦ ರಷ್ಟು ಸಂಘಗಳು ಯಾವುದೇ ಸಹಾಯ ಧನವನ್ನು ಪಡೆದುಕೊಂಡಿರುವುದಿಲ್ಲ. ಏಕೆಂದರೆ ರಚಿತವಾದ ಬಹುತೇಕ ಸಂಘಗಳು ಬಡತನ ರೇಖೆಯ ಕೆಳಗಿರುವವರನ್ನು ಒಳಗೊಂಡ ಸದಸ್ಯರಿಂದ ಕೂಡಿರುವುದಿಲ್ಲ. ಸಹಾಯ ಧನವನ್ನು ಪಡೆದುಕೊಳ್ಳದ ಸಂಘಗಳು ಇತ್ತೀಚೆಗೆ ರಚಿತವಾದ ಸಂಘಗಳಾಗಿವೆ. ಅಲ್ಲದೆ ಸಂಘಗಳಿಗೆ ಯಾವ ಯಾವ ಸೌಲಭ್ಯಗಳು ದೊರೆಯುತ್ತವೆ ಎನ್ನುವುದು ಈ ಸಂಘಗಳಿಗೆ ತಿಳಿದಿರುವುದಿಲ್ಲ. ಸಂಘಗಳನ್ನು ರಚಿಸಿದವರಿಗೆ ಕೇಳಿದರೆ ಮೊದಲು ಉಳಿತಾಯ ಮಾಡಿ ನಂತರ ತಿಳಿಸುತ್ತೇವೆ ಎನ್ನುವ ಮಾತನ್ನು ಹೇಳುತ್ತಾರೆ ಎನ್ನವುದು ಅಂತಹ ಸಂಘದ ಸದಸ್ಯರ ಅಭಿಪ್ರಾಯವಾಗಿದೆ. ಅದರ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೧೨ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೧೨
ಸಹಾಯ ಧನ ಪಡೆದುಕೊಂಡ ಸಂಘದ ಪ್ರಮಾಣ

| ಕ್ರ.ಸಂ | ಗ್ರಾಮ ಪಂಚಾಯತಿ | ೫,೦೦೦ ಸಾವಿರ | | ೧೦,೦೦೦ ಸಾವಿರ | | ೨೫,೦೦೦ ಸಾವಿರ | | ಯಾವುದೂ ಇಲ್ಲ | | ಒಟ್ಟು | |
|---|---|---|---|---|---|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸತ್ತಿ | ೧೬ | ೩೨ | ೦೫ | ೧೦ | – | – | ೨೯ | ೫೮ | ೫೦ | ೧೬.೬ |
| ೦೨ | ಮದಬಾವಿ | ೧೩ | ೨೬ | ೦೩ | ೦೬ | ೦೨ | ೦೪ | ೩೨ | ೬೪ | ೫೦ | ೧೬.೭ |
| ೦೩ | ಮುರಗುಂಡಿ | ೧೭ | ೩೪ | ೦೪ | ೦೮ | ೦೧ | ೦೨ | ೨೮ | ೫೬ | ೫೦ | ೧೬.೭ |
| ೦೪ | ಅನಂತಪುರ | ೧೧ | ೨೨ | ೦೬ | ೧೨ | – | – | ೩೩ | ೬೬ | ೫೦ | ೧೬.೬ |
| ೦೫ | ಶಿರಹಟ್ಟಿ | ೧೫ | ೩೦ | ೦೭ | ೧೪ | ೦೨ | ೦೪ | ೨೬ | ೫೨ | ೫೦ | ೧೬.೭ |
| ೦೬ | ತೆಲಸಂಗ | ೧೪ | ೨೮ | ೦೩ | ೦೬ | ೦೧ | ೦೨ | ೩೨ | ೬೪ | ೫೦ | ೧೬.೭ |
| | ಒಟ್ಟು | ೮೬ | ೨೮.೭ | ೨೮ | ೯.೩ | ೦೬ | ೦೨ | ೧೮೦ | ೬೦ | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೩ ಸಂಘದ ಸಭೆಯಲ್ಲಿ ಚರ್ಚಿಸಲ್ಪಡುವ ವಿಷಯಗಳು

ಸಂಘದ ರಚನೆಯು ಗ್ರಾಮದ ಸಮಸ್ಯೆಗಳನ್ನು ನಿರ್ಮೂಲನೆ ಮಾಡುವಲ್ಲಿ, ಜಾತೀಯತೆಯನ್ನು ಹೋಗಲಾಡಿಸುವಲ್ಲಿ, ಉದ್ಯೋಗ ಮತ್ತು ಮಾರುಕಟ್ಟೆಯ ಸಮಸ್ಯೆಗಳನ್ನು ಚರ್ಚಿಸಿ ಸರಿಯಾದ ಮಾರ್ಗವನ್ನು ಕಂಡುಕೊಳ್ಳಲು ಸಂಘದ ಸಭೆಯು ಪ್ರಮುಖ ಪಾತ್ರ ವಹಿಸಬಲ್ಲದು. ಇದಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿದಾಗ ಶೇಕಡ ೪.೭ ರಷ್ಟು ಸದಸ್ಯರು ಸಂಘದ ಸದಸ್ಯರ ಮನೆಯಲ್ಲಿರುವ ಸಮಸ್ಯೆಗಳನ್ನು ಚರ್ಚಿಸಿ ಸೂಕ್ತ ಪರಿಹಾರವನ್ನು ಕಂಡುಕೊಳ್ಳುತ್ತೇವೆ ಎಂದು ತಿಳಿಸಿದರೆ, ಶೇಕಡ ೫.೭ ರಷ್ಟು ಸಂಘದ ಸದಸ್ಯರು ಗ್ರಾಮದ ಕುಡಿಯುವ ನೀರು, ನೈರ್ಮಲ್ಯ, ಕುಡಿತದ ಬಗ್ಗೆ ಚರ್ಚಿಸುತ್ತೇವೆ ಎಂದಿವೆ. ಶೇಕಡ ೬೯.೩ ರಷ್ಟು ಸಂಘಗಳು ಪ್ರಾಮಾಣಿಕವಾಗಿ ಉಳಿತಾಯವನ್ನು ಮಾತ್ರ ಮಾಡುತ್ತೇವೆ. ಸಂಘದಲ್ಲಿ ಯಾವ ವಿಷಯಗಳನ್ನು ಚರ್ಚಿಸಬೇಕು, ಅದರಿಂದ ಆಗುವ ಪ್ರಯೋಜನಗಳೇನು ಎನ್ನುವುದನ್ನು ಯಾರೂ ತಿಳಿಸಿರುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಸಿವೆ. ಕಾರಣಗಳನ್ನು ಹುಡುಕಿದಾಗ ಕಂಡು ಬಂದಿದ್ದೇನೆಂದರೆ ಈ ಸಂಘಗಳು ತಮ್ಮಷ್ಟಕ್ಕೆ ತಾವು ಉಳಿತಾಯ ಮಾಡುತ್ತವೆಯೇ ವಿನ: ಕಾಲಕಾಲಕ್ಕೆ ತಮಗೆ ಸಂಬಂಧಿಸಿದ ಸಂಸ್ಥೆಯನ್ನು ಭೇಟಿ ಮಾಡಿ ಮಾಹಿತಿಯನ್ನು ಪಡೆದು ಕೊಳ್ಳುವುದಿಲ್ಲ. ಸಂಸ್ಥೆಗಳೂ ಮೇಲಿಂದ ಮೇಲೆ ಭೇಟಿ ನೀಡಿ ಪರಿಶೀಲಿಸದ ಸ್ಥಿತಿಯಲ್ಲಿದ್ದರೆ, ಬ್ಯಾಂಕುಗಳು ಕೇವಲ ಸಂಘಗಳನ್ನು ರಚಿಸಿ ಕೈತೊಳೆದುಕೊಂಡಿವೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಂಗನವಾಡಿ ಕಾರ್ಯಕರ್ತರ ಮೇಲೆ ಬಿಟ್ಟು ಬಿಟ್ಟಿದೆ.

ಅಂಗನವಾಡಿ ಕಾರ್ಯಕರ್ತರು ಹೆಸರಿಗೆ ಸಭೆಯಲ್ಲಿ ಕೆಲವು ವಿಷಯಗಳನ್ನು ಚರ್ಚಿಸಲಾಯಿತು ಎಂದು ಬರೆದು ಕೈತೊಳೆದು ಕೊಳ್ಳುತ್ತಾರೆ. ಇದರಿಂದ ಅಥಣಿ ಪರಿಸರದಲ್ಲಿನ ಎಲ್ಲ ಸಂಘಗಳು ಪ್ರತಿವಾರ ಸಭೆ ಸೇರಿದರೂ ಕೇವಲ ಉಳಿತಾಯವನ್ನು ಮಾತ್ರ ಮಾಡುತ್ತವೆ. ಸಂಘದಲ್ಲಿ ಚರ್ಚಿಸಲ್ಪಡುವ ವಿಷಯಗಳನ್ನು ಕೋಷ್ಟಕ ೪.೧೩ ರಲ್ಲಿ ತಿಳಿಸಲಾಗಿದೆ,

ಕೋಷ್ಟಕ ೪.೧೩

ಸಂಘದ ಸಭೆಗಳಲ್ಲಿ ಚರ್ಚಿಸಲ್ಪಡುವ ವಿಷಯಗಳು

| ಕ್ರ.ಸಂ | ಚರ್ಚಿಸಲ್ಪಡುವ ವಿಷಯಗಳು | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ಸದಸ್ಯರ ಸಮಸ್ಯೆಗಳು | ೧೪ | ೪.೭ |
| ೦೨ | ಗ್ರಾಮದ ಸಮಸ್ಯೆಗಳು | ೧೭ | ೫.೭ |
| ೦೩ | ಇತರೆ | ೬೧ | ೨೦.೩ |
| ೦೪ | ಯಾವುದೂ ಇಲ್ಲ | ೨೦೮ | ೬೯.೩ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೪ ಸಾಲದ ವಿಧಾನಗಳು

ಸಂಘವು ಯಶಸ್ವಿಯಾಗಬೇಕಾದರೆ ಅದರ ಸಾಲದ ನಿರ್ವಹಣೆ ಮತ್ತು ಸಾಲದ ವಿಧಾನ ಸರಿಯಾಗಿರಬೇಕು. ಸಾಲ ನೀಡುವಾಗ ಅಗತ್ಯ ಇರುವವರನ್ನು ಬಿಟ್ಟು ಬೇರೆಯವರಿಗೆ ನೀಡಿದರೆ ಸಂಘವು ಬಹುಬೇಗ ಮುರಿದು ಹೋಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿದಾಗ ಶೇಕಡ ೧೪.೭ ರಷ್ಟು ಸದಸ್ಯರು ಒಮ್ಮತದ ಅಭಿಪ್ರಾಯದ ಮೇಲೆ ಸಾಲವನ್ನು ನೀಡುತ್ತೇವೆ ಎಂದು ಹೇಳಿದರೆ, ಶೇಕಡ ೨೯ ರಷ್ಟು ಸದಸ್ಯರು ಸಮಸ್ಯೆಗಳ ಮೇಲೆ ನೀಡುತ್ತೇವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿವೆ. ಶೇಕಡ ೨೩.೭ ರಷ್ಟು ಸದಸ್ಯರು ಕೇಳಿದವರಿಗೆ ಕೊಡುತ್ತೇವೆ ಎಂದು ಒಪ್ಪಿಕೊಂಡಿವೆ. ಈ ಅಭಿಪ್ರಾಯ ಸತ್ಯಕ್ಕೆ ಹತ್ತಿರವಾಗಿದೆ. ಏಕೆಂದರೆ ಯಾವ ಸಂಘಗಳೂ ಯಾವ ಸಮಸ್ಯೆಗೆ ಶೇಕಡವಾರು ಎಷ್ಟು ಹಣವನ್ನು ನೀಡಬೇಕು ಎಂದು ನಿಗದಿಪಡಿಸಿಕೊಂಡಿರುವುದಿಲ್ಲ. ಇದಕ್ಕೆ ಪೂರಕವಾಗಿ ಶೇಕಡ ೩೨.೬ ರಷ್ಟು ಸಂದರ್ಶಿತ ಸದಸ್ಯರು ಯಾವುದೇ ವಿಧಾನವಿಲ್ಲದೆ ಸಾಲವನ್ನು ನೀಡುತ್ತೇವೆ ಎಂದು ಒಪ್ಪಿಕೊಂಡಿವೆ. ಅದರ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೧೩ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೧೪
ಸಂಘದಲ್ಲಿ ಸಾಲ ನೀಡುವ ವಿಧಾನಗಳು

| ಕ್ರ.ಸಂ | ಸಾಲ ನೀಡುವ ವಿಧಾನಗಳು | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ಒಮ್ಮತದ ಅಭಿಪ್ರಾಯದ ಮೇಲೆ | ೪೪ | ೧೪.೭ |
| ೦೨ | ಸಮಸ್ಯೆಗಳ ಆಧಾರದ ಮೇಲೆ | ೮೭ | ೨೯ |
| ೦೩ | ಸಾಲ ಕೇಳಿದವರಿಗೆ | ೭೧ | ೨೩.೭ |
| ೦೪ | ಯಾವುದೇ ವಿಧಾನವಿಲ್ಲದೆ | ೯೮ | ೩೨.೬ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೫ ಸಾಲದ ಉದ್ದೇಶಗಳು

ಅಥಣಿ ತಾಲ್ಲೂಕಿನಲ್ಲಿ ರಚಿತವಾದ ಬಹುತೇಕ ಸಂಘಗಳು ತಾಲ್ಲೂಕಿನಲ್ಲಿನ ವಿವಿಧ ಬ್ಯಾಂಕುಗಳಲ್ಲಿ ಮತ್ತು ಅವುಗಳ ವಿವಿಧ ಶಾಖೆಗಳಲ್ಲಿ ಆಡು ಸಾಕಣಿಕೆ, ಎಮ್ಮೆ ಸಾಕಣಿಕೆ, ಅಂದರೆ ಹೈನುಗಾರಿಕೆಗೆ, ವ್ಯಾಪಾರ ಮಾಡಲು ಹೀಗೆ ವಿವಿಧ ಉದ್ದೇಶಗಳಿಗಾಗಿ ಸಾಲವನ್ನು ಪಡೆದುಕೊಂಡಿವೆ. ಬ್ಯಾಂಕುಗಳು ಸಹ ಮಹಿಳಾ ಸಂಘ-ಸಂಸ್ಥೆಗಳ ಮೇಲೆ ಹೆಚ್ಚು ವಿಶ್ವಾಸವನ್ನು ಹೊಂದಿವೆ. ಆದರೆ ಇದಕ್ಕೆ ಅಪವಾದ ಎನ್ನುವಂತೆ ಮದಬಾವಿ ಮತ್ತು ಅನಂತಪುರ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಕೆಲವು ಸಂಘಗಳಿಗೆ ಅಲ್ಲಿನ ಬ್ಯಾಂಕುಗಳು ಹಿಂದೆ ಸ್ತ್ರೀ-ಶಕ್ತಿ ಸಂಘದ ಮಹಿಳಾ ಸದಸ್ಯರ ಕುಟುಂಬದವರು ಹಿಂದೆ ಚರ್ಮ ಉದ್ದಿಮೆಗಾಗಿ ಪಡೆದ ಸಾಲವನ್ನು ಮರು ಪಾವತಿಸಿಲ್ಲ ಅದನ್ನು ಮೊದಲು ಮರುಪಾವತಿಸಿ ಸಾಲ ಕೊಡುತ್ತೇವೆ ಎನ್ನುತ್ತಿವೆ ಎನ್ನುವುದು ಅಲ್ಲಿ ಬ್ಯಾಂಕುಗಳಿಂದ ಸಾಲ ಪಡೆಯದ ಮಹಿಳಾ ಸದಸ್ಯರ ಅಭಿಪ್ರಾಯವಾಗಿದೆ. ಅದರ ಪ್ರಮಾಣ ಶೇಕಡ ೯.೪ ರಷ್ಟಿದೆ. ಶೇಕಡ ೩೪.೫ ರಷ್ಟು ಸಂಘಗಳು ವ್ಯಾಪಾರಕ್ಕಾಗಿ ಸಾಲವನ್ನು ಪಡೆದುಕೊಂಡು ಬಟ್ಟೆ ಮಾರಾಟ ಮಾಡುವುದು, ಹಪ್ಪಳ ಮಾಡಿ ಮಾರಾಟ ಮಾಡುವುದು, ಕಿರಣಿ ಅಂಗಡಿಗಳನ್ನು ತರೆದು ವ್ಯಾಪಾರ ಮಾಡುವುದು, ಚಪ್ಪಲಿ ತಯಾರಿಸಿ ಮಾರಾಟ ಮಾಡುವುದನ್ನು ಮಾಡುತ್ತಿವೆ. ಶೇಕಡ ೪.೭ ರಷ್ಟು ಸಂಘಗಳು ಮಗಳ ಅಥವಾ ಮಗನ ಮದುವೆಯ ವೆಚ್ಚಕ್ಕಾಗಿ ಸಾಲವನ್ನು ಪಡೆದಿವೆ. ಅಷ್ಟೇ ಪ್ರಮಾಣದಲ್ಲಿ ಆಸ್ಪತ್ರೆಗಾಗಿ ಸಾಲವನ್ನು ಪಡೆದಿವೆ. ಶೇಕಡ ೯.೯ ರಷ್ಟು ಸಂಘಗಳು ಮನೆ ರಿಪೇರಿ ಮಾಡಲು ಅಥವಾ ಕಟ್ಟಲು ಸಾಲವನ್ನು ಪಡೆದುಕೊಂಡಿವೆ. ಉಳಿದ ಶೇಕಡ ೩೬.೮ ರಷ್ಟು ಸಂಘಗಳು ಹೈನುಗಾರಿಕೆಗೆ ಸಾಲವನ್ನು ಪಡೆದುಕೊಂಡು ಎಮ್ಮೆಯನ್ನು ಸಾಕುತ್ತಾ ಹಾಲನ್ನು ಡೈರಿಗೆ ಹಾಕುತ್ತಿವೆ. ಅಥಣಿ ಹಾಲು ಉತ್ಪಾದನೆಯಲ್ಲಿ ಮುಂಚೂಣಿಯಲ್ಲಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ. ಶೇಕಡ ೪೩(೧೨೯) ರಷ್ಟು ಸಂಘಗಳು

ಇತೀಚೆಗೆ ರಚಿತವಾಗಿರುವುದರಿಂದ ಯಾವುದೇ ಸಾಲವನ್ನು ಪಡೆದು ಕೊಂಡಿಲ್ಲ. ಉಳಿದ ಸಂಘಗಳು ಬ್ಯಾಂಕುಗಳ ಮೂಲಕ ಸಾಲವನ್ನು ಬ್ಯಾಂಕುಗಳ ಮೂಲಕ ಪಡೆದುಕೊಂಡಿವೆ. ಬ್ಯಾಂಕುಗಳಿಗೆ ಯಾವ ಯಾವ ಉದ್ದೇಶದ ಆಧಾರದ ಮೇಲೆ ಸಾಲವನ್ನು ನೀಡಿದ್ದೀರಿ ಎಂದು ಕೇಳಿದರೆ ಅವರು ಯಾವುದಕ್ಕಾದರೂ ಬಳಸಿಕೊಳ್ಳಲಿ ಸಕಾಲಕ್ಕೆ ತುಂಬುವುದರಿಂದ ಸಾಲವನ್ನು ನೀಡುತ್ತೇವೆ. ಹೆಚ್ಚಿನ ಸಂಘಗಳು ಹೈನುಗಾರಿಕೆಗೆ ಸಾಲವನ್ನು ಪಡೆಯುತ್ತವೆ ಎನ್ನುವುದು ವಿವಿಧ ಬ್ಯಾಂಕುಗುಳ ಅಧಿಕಾರಿಗಳ ಅಭಿಪ್ರಾಯವಾಗಿದೆ. ಆದರೆ ಮಹಿಳಾ ಸಬಲೀಕರಣದಲ್ಲಿ ಬ್ಯಾಂಕುಗಳ ಪಾತ್ರವೂ ಅಷ್ಟೇ ಮುಖ್ಯವಾಗಿದೆ. ಆದ್ದರಿಂದ ಬ್ಯಾಂಕುಗಳೂ ಸಹ ಮಹಿಳಾ ಸಬಲೀಕರಣದಲ್ಲಿ ಸಮರ್ಪಕವಾಗಿ ತೊಡಗಬೇಕಾಗಿದೆ. ಸಂಘಗಳು ಪಡೆದುಕೊಂಡ ಸಾಲದ ವಿವಿಧ ಉದ್ದೇಶಗಳು ಮತ್ತು ಸಾಲದ ಪ್ರಮಾಣವನ್ನು ಕೋಷ್ಟಕ ೪.೧೫ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೧೫
ಸಂಘಗಳು ಪಡೆದುಕೊಂಡಿರುವ ಸಾಲದ ಉದ್ದೇಶಗಳು ಮತ್ತು ಪ್ರಮಾಣ

| ಕ್ರ.ಸಂ | ಸಾಲದ ಉದ್ದೇಶಗಳು | ೨೦,೦೦೦ ರಿಂದ ೨೫,೦೦೦ | | ೨೦,೦೦೦ ಸಾವಿರದ ವರೆಗೆ | | ೧೦,೦೦೦ ರಿಂದ ೧೫,೦೦೦ | | ೫,೦೦೦ ಸಾವಿರದ ವರೆಗೆ | | ೫,೦೦೦ ರಿಂದ ೭,೫೦೦ | | ಒಟ್ಟು | |
|---|---|---|---|---|---|---|---|---|---|---|---|---|---|
| | | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ | ಸಂ | ಶೇ |
| ೦೧ | ವ್ಯಾಪಾರ | ೧೨ | ೨೦.೩ | ೧೧ | ೧೮.೬ | ೧೩ | ೨೨.೨ | ೦೯ | ೧೫.೨ | ೧೪ | ೨೩.೭ | ೫೯ | ೩೪.೫ |
| ೦೨ | ಮದುವೆ | ೦೨ | ೨೫ | ೦೧ | ೧೨.೫ | ೦೧ | ೧೨.೫ | ೦೨ | ೨೫ | ೦೨ | ೨೫ | ೦೮ | ೪.೭ |
| ೦೩ | ಆಸ್ಪತ್ರೆಗೆ | ೦೧ | ೧೨.೫ | ೦೨ | ೨೫ | ೦೨ | ೨೫ | ೦೧ | ೧೨.೫ | ೦೨ | ೨೫ | ೦೮ | ೪.೭ |
| ೦೪ | ಮನೆ ರಿಪೇರಿ | ೦೩ | ೧೭.೬ | ೦೩ | ೧೭.೬ | ೦೪ | ೨೩.೬ | ೦೪ | ೨೩.೬ | ೦೩ | ೧೭.೬ | ೧೭ | ೯.೯ |
| ೦೫ | ಹೈನುಗಾರಿಕೆ | ೧೩ | ೨೦.೬ | ೦೫ | ೭.೯ | ೧೪ | ೨೨.೨ | ೧೫ | ೨೩.೮ | ೧೬ | ೨೫.೫ | ೬೩ | ೩೬.೮ |
| ೦೬ | ಯಾವುದೂ ಇಲ್ಲ | ೦೨ | ೧೨.೫ | ೦೫ | ೩೧.೩ | ೦೨ | ೧೨.೫ | ೦೩ | ೧೮.೭ | ೦೪ | ೨೫ | ೧೬ | ೯.೪ |
| ಒಟ್ಟು | | ೩೩ | ೧೯.೩ | ೨೭ | ೧೫.೮ | ೩೬ | ೨೧ | ೩೪ | ೧೯.೯ | ೪೧ | ೨೪ | ೧೭೧ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೬ ಸಾಲ ಮರುಪಾವತಿ

ಸಾಲವನ್ನು ಪಡೆದುಕೊಳ್ಳುವುದು ಎಷ್ಟು ಮುಖ್ಯವೋ ಸಕಾಲಕ್ಕೆ ಮರುಪಾವತಿ ಅಷ್ಟೇ ಮುಖ್ಯ. ಸಕಾಲಕ್ಕೆ ಸಾಲ ಮರುಪಾವತಿಯಾಗದೇ ಇದ್ದರೆ ಸಾಲ ನೀಡಿದ ಸಂಸ್ಥೆಗಳಲ್ಲಿ ವಿಶ್ವಾಸವನ್ನು ಕಳೆದು ಕೊಳ್ಳಬಹುದು. ಆದರೆ ಸ್ವ-ಸಹಾಯ ಸಂಘಗಳು ಸಕಾಲಕ್ಕೆ ತಾವು ಪಡೆದ ಸಾಲವನ್ನು ಸಕಾಲಕ್ಕೆ ಮರುಪಾವತಿಸುವುದರ ಮೂಲಕ ಬ್ಯಾಂಕುಗಳ ವಿಶ್ವಾಸವನ್ನು ಗಳಿಸಿವೆ. ಆದರೆ ಆದಾಯೋತ್ಪಾದನೆಗೆ ಪಡೆದುಕೊಂಡ ಸಾಲವನ್ನು ಸಕಾಲಕ್ಕೆ ಮರುಪಾವತಿಯಾಗುತ್ತದೆ. ಇತರೆ ಕಾರ್ಯಗಳಿಗೆ ಬಳಸಿಕೊಂಡ

ಸಂಘಗಳು ಸಕಾಲಕ್ಕೆ ಮರುಪಾವತಿಸದಿದ್ದರೂ ತಡವಾಗಿಯಾದರೂ ಪಾವತಿಸುತ್ತಿವೆ. ಇದಕ್ಕೆ ಕಾರಣಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದಾಗ ಕಂಡುಬಂದಿದ್ದೇನೆಂದರೆ ಸಂಘಗಳ ಮೇಲಿ ಮನೆಯ ಪುರುಷರು ಮಹಿಳಾ ಸಂಘಗಳನ್ನು ಬಳಸಿಕೊಂಡು ಸಾಲವನ್ನು ಪಡೆದುಕೊಳ್ಳುತ್ತಿರುವುದು ಕಂಡುಬಂದಿತು. ರೈತರು ಬ್ಯಾಂಕುಗಳಿಂದ ಪಡೆದ ಸಾಲವನ್ನು ಸರಿಯಾಗಿ ಪಾವತಿಸದಿರುವುದರಿಂದ ರೈತರಿಗೆ ಸಾಲವನ್ನು ನೀಡುವಾಗ ವಿವಿಧ ನಿಯಂತ್ರಣವನ್ನು ಹಾಕುತ್ತವೆ, ಇಲ್ಲವೆ ಸಾಲವನ್ನು ನೀಡುವಾಗ ಮೀನಾಮೇಷ ಮಾಡುತ್ತವೆ ಎನ್ನವುದು. ಆದರೂ ಸಹ ಶೇಕಡ ೫೩ ರಷ್ಟು ಸಂಘದ ಸದಸ್ಯರು ಸಮಯಕ್ಕೆ ಸರಿಯಾಗಿ ಸಾಲವನ್ನು ಮರುಪಾವತಿಸುತ್ತಿವೆ. ಶೇಕಡ ೪೨ ರಷ್ಟು ಸದಸ್ಯರು ಅವಧಿ ಮುಂಚಿತವಾಗಿಯೆ ಸಾಲವನ್ನು ಮರುಪಾವತಿಸಿವೆ ಮತ್ತು ಶೇಕಡ ೫ ರಷ್ಟು ಸಂಘಗಳು ಮಾತ್ರ ಸಮಯಕ್ಕೆ ಸರಿಯಾಗಿ ಮರುಪಾವತಿ ಮಾಡಿರುವುದಿಲ್ಲ ಎನ್ನುವುದು ಸಂದರ್ಶಿತ ಬ್ಯಾಂಕ್ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಅಭಿಪ್ರಾಯವಾಗಿದೆ. ಸಾಲವನ್ನು ಮರುಪಾವತಿಸಿದ ಸಂಘಗಳ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೧೬ ರಲ್ಲಿ ತಿಳಿಸಲಾಗಿದೆ.

ಕೋಷ್ಟಕ ೪.೧೬
ಸಂಘದ ಸದಸ್ಯರಿಂದ ಸಾಲ ಮರುಪಾವತಿ

| ಕ್ರ.ಸಂ | ಸಾಲ ಮರುಪಾವತಿ | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ಸಮಯಕ್ಕೆ ಸರಿಯಾಗಿ ಪಾವತಿಸಲಾಗಿದೆ | ೧೫೯ | ೫೩ |
| ೦೨ | ಸಮಯಕ್ಕೆ ಸರಿಯಾಗಿ ಪಾವತಿಸಿಲ್ಲ | ೧೫ | ೫ |
| ೦೩ | ಅವಧಿ ಮುಂಚಿತವಾಗಿ ಪಾವತಿಸಲಾಗಿದೆ | ೧೨೬ | ೪೨ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೭ ಸಂಘಗಳಲ್ಲಿನ ಸಮಸ್ಯೆಗಳು

ಸಂಘಗಳು ಉತ್ತಮವಾಗಿ ಸಮಯಕ್ಕೆ ಸರಿಯಾಗಿ ಉಳಿತಾಯ ಮಾಡುತ್ತವೆ. ಸಾಲವನ್ನು ಸಮಯಕ್ಕೆ ಸರಿಯಾಗಿ ಮರುಪಾವತಿ ಮಾಡುತ್ತವೆ ಎಂದ ಮಾತ್ರಕ್ಕೆ ಸಂಘಗಳು ಯಶಸ್ವಿಯಾದ ಸಂಘಗಳಾಗಿವೆ. ಇದರಿಂದ ಮಹಿಳೆಯರ ಸಬಲೀಕರಣ ಯಶಸ್ವಿಯಾಗಿದೆ ಎಂದು ತೀರ್ಮಾನಿಸುವುದು ತಪ್ಪಾಗುತ್ತದೆ. ಏಕೆಂದರೆ ಹಲವಾರು ಸಮಸ್ಯೆಗಳಿಂದ ಸಂಘಗಳು ಪರಿಪೂರ್ಣವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತಿಲ್ಲ. ಅದಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿದಾಗ ಕಂಡುಬಂದಿದ್ದೇನೆಂದರೆ, ಶೇಕಡ

೨೬.೩ ರಷ್ಟು ಸಂಘದಲ್ಲಿ ಹೊಂದಾಣಿಕೆ ಇಲ್ಲದಿರುವುದು. ಇದಕ್ಕೆ ಮೂಲ ಕಾರಣವೇನೆಂದರೆ ಕೆಲವು ಸದಸ್ಯರು ಸಂಘದ ಸಭೆಗಳಿಗೆ ಬಂದು ಉಳಿತಾಯ ಮಾಡುತ್ತಾರೆ. ಬಹುತೇಕ ಸದಸ್ಯರು ಸಂಘದ ಪ್ರತಿನಿಧಿ ಇಲ್ಲವೆ ಅಂಗನವಾಡಿ ಕಾರ್ಯಕರ್ತೆಯರಿಗೆ ಹಣಕೊಟ್ಟು ತಮ್ಮ ಕಾರ್ಯಗಳಿಗೆ, ಅಂದರೆ ಕೂಲಿ ಇತರೆ ಕೆಲಸಗಳಿಗೆ ಹೋಗುತ್ತಾರೆ. ಎನ್ನುವುದು ಅನಂತಪುರ, ತೆಲಸಂಗ, ಮದಬಾವಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಶನೇಶ್ವರ, ಸಿದ್ದೇಶ್ವರ, ಸಂಘಗಳು, ಅನಂತಪುರ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಸಂಘಗಳ ಅಭಿಪ್ರಾಯವಾಗಿದೆ. ಶೇಕಡ ೩೦.೩ ರಷ್ಟು ಸದಸ್ಯರು ಸಂಘದಲ್ಲಿ ಸದಸ್ಯರು ಸಂಘದ ಸಭೆಗಳಿಗೆ ಬರುವುದಿಲ್ಲ. ಅಭಿವೃದ್ಧಿ ಹೊಂದಲು ಬೇಕಾದ ಉದ್ಯೋಗ ಕೈಗೊಳ್ಳಲು ಸಹಕಾರ ನೀಡುತ್ತಿಲ್ಲ. ಉಳಿತಾಯದ ಹಣವನ್ನು ಸಭೆಗೆ ಬಂದು ತುಂಬದೇ ಬೇಕಾದ ಸ್ಥಳದಲ್ಲಿ ನೀಡುತ್ತಾರೆ. ಕೇವಲ ಎಮ್ಮೆ ಸಾಕಲು ಆಸಕ್ತಿ ಹೊಂದಿರುತ್ತಾರೆಯೇ ವಿನ: ಸ್ವಯಂ ಉದ್ಯೋಗ ಕೈಗೊಳ್ಳಲು ಇಚ್ಚಿಸುವುದಿಲ್ಲ ಎನ್ನುವುದು ಶೇಕಡ ೩೦.೩ ರಷ್ಟು ಸಂದರ್ಶಿತ ಸದಸ್ಯರ ಅಭಿಪ್ರಾಯವಾಗಿದೆ. ಆದರೂ ಸಹ ಹೈನುಗಾರಿಕೆಯಿಂದ ವಿವಿಧ ಲಾಭಗಳನ್ನು ಪಡೆದುಕೊಳ್ಳಬಹುದು ಎನ್ನುವುದನ್ನು ಆ ನಿಟ್ಟಿನಲ್ಲಿ ಪ್ರೋತ್ಸಾಹಿಸಿದರೆ ಅದರಿಂದ ವಿದ್ಯುತ್ ಉತ್ಪಾದನೆ, ಇಲ್ಲವೆ ಮನೆ ಬಳಕೆಗಾಗಿ ಗ್ಯಾಸ್ ಉತ್ಪಾದನೆ, ಎರೆಹುಳು ಗೊಬ್ಬರ ಮತ್ತು ಕಬ್ಬನ್ನು ಕಡಿದ ಮೇಲೆ ಬೆಂಕಿಗೆ ಬಲಿಯಾಗುವ ಕಬ್ಬಿನಗರಿಯನ್ನು ಬಳಸಿ ಗೊಬ್ಬರವನ್ನು ತಯಾರಿಸಿಕೊಂಡು ಇನ್ನೂ ಹೆಚ್ಚು ಆದಾಯ ಗಳಿಸಬಹುದು. ಸಂಘದಲ್ಲಿ ಆಂತರಿಕ ಸಾಲ ಪಡೆಯುವ ಸದಸ್ಯರು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾಲ ಪಡೆಯದೆ, ಹೆಚ್ಚಿನ ಬಡ್ಡಿ ಪಡೆದುಕೊಳ್ಳುವ ದುರುದ್ಧೇಶದಿಂದ ತಮಗೆ ಅಗತ್ಯವಿಲ್ಲದಿದ್ದರೂ, ಇತರರಿಗೆ ಸಾಲವನ್ನು ನೀಡಿ ಆದಾಯಗಳಿಸುವ ಪ್ರಯತ್ನವನ್ನು ಮಾಡುವುದನ್ನು ಸಂದರ್ಶನದಲ್ಲಿ ಕಂಡುಕೊಳ್ಳಲಾಯಿತು. ಇದಕ್ಕೆ ಸಂಬಂಧಿಸಿದಂತೆ ಶೇಕಡ ೧೧ ರಷ್ಟು ಸದಸ್ಯರು ಅದರಲ್ಲೂ ಸತ್ತಿ, ಮುರುಗುಂಡಿ ಗ್ರಾಮ ಪಂಚಾಯತಿ ಪ್ರದೇಶದಲ್ಲಿ ಬರುವ ಸಂಘದ ಸದಸ್ಯರ ಅಭಿಪ್ರಾಯವಾಗಿದೆ. ಅದನ್ನು ಕೋಷ್ಟಕ ೪.೧೭ ರಲ್ಲಿ ಕಾಣಬಹುದು

ಕೋಷ್ಟಕ ೪.೧೭

ಸಂಘಗಳಲ್ಲಿನ ಸಮಸ್ಯೆಗಳು

| ಕ್ರ.ಸಂ | ಸಂಘಗಳಲ್ಲಿನ ಸಮಸ್ಯೆಗಳು | ಒಟ್ಟು | |
|---|---|---|---|
| | | ಸಂಖ್ಯೆ | ಶೇಕಡ |
| ೦೧ | ಹೊಂದಾಣಿಕೆಯ ಕೊರತೆ | ೭೯ | ೨೬.೩ |
| ೦೨ | ಬೆಳವಣಿಗೆ ಹೊಂದಲು ಆಗದಿರುವುದು | ೯೧ | ೩೦.೩ |
| ೦೩ | ಸಂಘದ ಹೊರಗಿನ ಸದಸ್ಯರಿಗೆ ಸಾಲನೀಡುತ್ತಿರುವುದು | ೩೩ | ೧೧ |
| ೦೪ | ಪುರುಷರ ಪ್ರಭಾವ | ೯೭ | ೩೨.೪ |
| ಒಟ್ಟು | | ೩೦೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

## ೪.೧೮ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಂಬಂಧ

ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಂಬಂಧ ಉತ್ತಮವಾಗಿರಬೇಕು. ಸಂಘಗಳನ್ನು ರಚಿಸಿದ ಸಂಸ್ಥೆಗಳು ಸಂಘಗಳನ್ನು ಪದೇ ಪದೇ ಉಳಿತಾಯವನ್ನು ಹೇಗೆ ಮಾಡುತ್ತಿವೆ? ಸಂಘದ ದಾಖಲೆಗಳನ್ನು ಹೇಗೆ ನಿರ್ವಹಿಸುತ್ತಿವೆ? ಸಭೆಗಳನ್ನು ಸಕಾಲಕ್ಕೆ ಸರಿಯಾಗಿ ನಡೆಸುತ್ತಿವೆಯೇ? ನಡೆಸುತ್ತಿದ್ದರೆ ಸಭೆಯಲ್ಲಿ ಯಾವ ಯಾವ ವಿಷಯಗಳನ್ನು ಚರ್ಚಿಸುತ್ತಿವೆ ಮತ್ತು ಚರ್ಚಿಸಿದ ವಿಷಯಗಳ ಮೇಲೆ ಹೇಗೆ ನಿರ್ಧಾರವನ್ನು ತಗೆದುಕೊಳ್ಳುತ್ತವೆ? ಅಡ್ಡ ಪ್ರಶ್ನೆಗಳ ಮೂಲಕ ಸದಸ್ಯರ ನಡುವೆ ಹೊಂದಾಣಿಕೆ ಇದೆಯೇ ಹೀಗೆ ಹಲವಾರು ವಿಷಯಗಳ ಬಗ್ಗೆ ತಿಳಿದು ಕೊಂಡು ಮಾರ್ಗದರ್ಶನ ಮಾಡಬೇಕು. ಇಲ್ಲದೇ ಹೋದರೆ ಸಂಘವೂ ಅಭಿವೃದ್ಧಿ ಹೊಂದುವುದಿಲ್ಲ ಮಹಿಳೆಯರ ಸಬಲೀಕರಣವೂ ಆಗುವುದಿಲ್ಲ.

ಇದಕ್ಕೆ ಸಂಬಂಧಿಸದಂತೆ ಮಾಹಿತಿಯನ್ನು ಸಂಗ್ರಹಿಸಿದಾಗ ಕಂಡುಬಂದುದ್ದೇನೆಂದರೆ ಶೇಕಡ ೨೧.೩ ರಷ್ಟು ಸಂಘದ ಸದಸ್ಯರು ಸಭೆ ನಡೆಸುವುದರ ಬಗ್ಗೆ, ದಾಖಲೆಗಳನ್ನು ಬರೆಯುವುದರ ಬಗ್ಗೆ ಮಾಹಿತಿ ನೀಡುತ್ತವೆ ಎಂದರೆ, ಶೇಕಡ ೩೭.೮ ರಷ್ಟು ಸಂಘದ ಸದಸ್ಯರು ಉದ್ಯೋಗವನ್ನು ಮಾಡಲು ಉಳಿತಾಯದ ಹಣವನ್ನು ಹೆಚ್ಚು ಖರ್ಚು ಮಾಡದಂತೆ ಸಲಹೆ ನೀಡುತ್ತವೆ ಎಂದು ತಿಳಿಸಿದರೆ, ಶೇಕಡ ೧೮.೭ ರಷ್ಟು ಸಂಘದ ಸದಸ್ಯರು ಸಂಘಗಳಿಗೆ ಸರಿಯಾಗಿ ಭೇಟಿಯನ್ನು ನೀಡುವುದಿಲ್ಲ ನೀವೆ ಬಂದು ಮಾಹಿತಿಯನ್ನು ಪಡೆದುಕೊಳ್ಳಬೇಕು ಎನ್ನುತ್ತವೆ. ಆದರೆ ಸಂಸ್ಥೆಗಳು ಅಥಣಿಯಲ್ಲಿ ಇರುವುದರಿಂದ ನಮ್ಮ ಕೆಲಸಗಳನ್ನು ಬಿಟ್ಟು ಹೋಗಬೇಕು. ಅದಕ್ಕಾಗಿ ೫೦ ರೂಗಳು ಬೇಕು. ಇದರಿಂದ ಕೂಲಿಯನ್ನು ಕಳೆದು ಕೊಳ್ಳ ಬೇಕು. ಅಲ್ಲದೆ ಇತ್ತೀಚೆಗೆ ಕೆಲವು ಸಂಸ್ಥೆಗಳು ಒಂದು ಮಾಹಿತಿ ನೀಡಲು ೫ ರೂ.ಗಳನ್ನು ಕೇಳುತ್ತಿರುವುದನ್ನ ತಿಳಿದುಕೊಳ್ಳಲಾಯಿತು. ದಾಖಲೆಗಳ ಪುಸ್ತಕಗಳನ್ನು ಒಂದು ಸಾವಿರಕ್ಕಿಂತ ಹೆಚ್ಚು ಹಣಕ್ಕೆ ನೀಡುತ್ತವೆ. ಉಳಿತಾಯದ ಹಣ ಇದಕ್ಕೆ ಖರ್ಚಾಗುತ್ತದೆ ಎನ್ನುತ್ತವೆ. ಅಲ್ಲದೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬ್ಯಾಂಕುಗಳ ವತಿಯಿಂದ ರಚಿತವಾದ ಸಂಘಗಳಿಗಂತೂ ಯಾರೂ ಭೇಟಿ ನೀಡುವುದಿಲ್ಲ. ಸಲಹೆಯನ್ನೂ ನೀಡುವುದಿಲ್ಲ. ಅಂಗನವಾಡಿ ಕಾರ್ಯಕರ್ತೆಯರಿಗೂ ತಿಳಿದಿರುವುದಿಲ್ಲ ಎಂದು ಶೇಕಡ ೫೫.೭ ರಷ್ಟು ಸಂಘದ ಸದಸ್ಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿವೆ. ಅದಕ್ಕೆ ಸಂಬಂಧಿಸಿದ ಶೇಕಡವಾರು ಪ್ರಮಾಣವನ್ನು ಕೋಷ್ಟಕ ೪.೧೮ ರಲ್ಲಿ ಕಾಣಬಹುದು.

ಕೋಷ್ಟಕ ೪.೧೮

ಸ್ವಯಂ ಸೇವಾ ಸಂಸ್ಥೆಗಳಿಂದ ಸಂಘಗಳ ಪರಿಶೀಲನೆ ಮತ್ತು ಸಲಹೆ

| ಕ್ರ.ಸಂ | ವಿಷಯಗಳು | ಪರಿಶೀಲಿಸಿ ಮಾಹಿತಿ ನೀಡುತ್ತಿವೆ | | ಮಾಹಿತಿಯನ್ನು ಸರಿಯಾಗಿ ನೀಡುವುದಿಲ್ಲ | |
|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೦೧ | ಸಭೆ ನಡೆಸುವುದು, ದಾಖಲೆ ನಿರ್ವಹಣೆ | ೪೯ | ೨೧.೩ | – | – |
| ೦೨ | ಉದ್ಯೋಗ, ಉಳಿತಾಯ, | ೮೭ | ೩೭.೮ | ೦೧ | ೧.೪ |
| ೦೩ | ಸಂಘದ ಸಮಸ್ಯೆಗಳ ನಿವಾರಣೆ | ೫೧ | ೨೨.೧ | ೩೦ | ೪೨.೯ |
| ೦೪ | ಸರಿಯಾಗಿ ಭೇಟಿ ನೀಡುವುದಿಲ್ಲ | ೪೩ | ೧೮.೭ | ೩೯ | ೫೫.೭ |
| ಒಟ್ಟು | | ೨೩೦ | ೧೦೦ | ೭೦ | ೧೦೦ |

ಆಕರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ

# ಅಧ್ಯಾಯ ಐದು

## ಸಾರಾಂಶ ಮತ್ತು ಸಂಶೋಧನೆಯಿಂದ ಕಂಡುಕೊಂಡ ಅಂಶಗಳು ಹಾಗೂ ಸಲಹೆಗಳು

೫.೧ ಸಾರಾಂಶ

೫.೨ ಸಂಶೋಧನೆಯಿಂದ ಕಂಡುಕೊಂಡ ಅಂಶಗಳು

೫.೨.೧ ವಯಸ್ಸು

೫.೨.೨ ಸಾಕ್ಷರತೆ

೫.೨.೩ ಸಂಘದ ರಚನೆ

೫.೨.೪ ಸಂಘದಿಂದ ಆಗಿರುವ ಪ್ರಯೋಜನಗಳು

೫.೨.೫ ಸಂಘದಲ್ಲಿನ ಉಳಿತಾಯ

೫.೨.೬ ಸದಸ್ಯರ ತಿಂಗಳ ಆದಾಯ

೫.೨.೭ ಸದಸ್ಯರ ತಿಂಗಳ ಖರ್ಚು

೫.೨.೮ ತರಬೇತಿ

೫.೨.೯ ಸಹಾಯ ಧನ

೫೨.೧೦ ಸಭೆಯಲ್ಲಿ ಚರ್ಚಿಸಲ್ಪಡುವ ವಿಷಯಗಳು

೫.೨.೧೧ ಸಾಲದ ನಿರ್ವಹಣೆ

೫.೨.೧೨ ಸಾಲದ ಉದ್ದೇಶಗಳು

೫.೨.೧೩ ಸಾಲ ಮರುಪಾವತಿ

೫.೨.೧೪ ಸಂಘಗಳ ಸಮಸ್ಯೆಗಳು

೫.೨.೧೫ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು

೫..೩ ಸಲಹೆಗಳು

೫.೩ ಉಪಸಂಹಾರ

# ಅಧ್ಯಾಯ ಐದು

## ಸಾರಾಂಶ ಮತ್ತು ಸಂಶೋಧನೆಯಿಂದ ಕಂಡುಕೊಂಡ ಅಂಶಗಳು ಹಾಗೂ ಸಲಹೆಗಳು

### ೫.೧ ಸಾರಾಂಶ

ಅಭಿವೃದ್ಧಿಯಲ್ಲಿ ಹಿಂದೆ ಉಳಿದಿರುವ ರಾಷ್ಟ್ರಗಳ ಪ್ರಮುಖ ಸಮಸ್ಯೆಗಳೆಂದರೆ, ಬಡತನ ಮತ್ತು ನಿರುದ್ಯೋಗ. ಭಾರತವು ಇದರಿಂದ ಹೊರತಾಗಿಲ್ಲ. ಇನ್ನು, ಭಾರತದ ಗ್ರಾಮೀಣ ಪ್ರದೇಶದತ್ತ ನೋಡಿದರೆ, ಬಡತನ, ನಿರುದ್ಯೋಗ, ಅನಕ್ಷರತೆ, ಮೊದಲಾದ ಸಮಸ್ಯೆಗಳಿಂದ ಕೂಡಿದೆ. ಕೇಂದ್ರ-ರಾಜ್ಯ ಸರ್ಕಾರಗಳು ವಿವಿಧ ಯೋಜನೆಗಳ ಮೂಲಕ, ಆಯೋಗಗಳ ಮೂಲಕ ಈ ಸಮಸ್ಯೆಗಳನ್ನು ನಿರ್ಮೂಲನೆ ಮಾಡಲು ಪ್ರಯತ್ನಗಳನ್ನು ಮಾಡುತ್ತಲೇ ಬಂದಿವೆ. ಆದರೆ ಯಾವ ಸಮಸ್ಯೆಗಳು ಸಂಪೂರ್ಣವಾಗಿ ನಿವಾರಣೆಯಾಗಿಲ್ಲ. ಅದಕ್ಕೆ ಭ್ರಷ್ಟಾಚಾರ, ಸೌಲಭ್ಯಗಳ ದುರುಪಯೋಗ, ಕಪ್ಪುಪಟ್ಟಿ, (ಯೋಜನೆಯನ್ನು ಹಂತಹಂತವಾಗಿ ಜಾರಿಗೊಳ್ಳಿಸುವುದು) ಯೋಜನೆಗಳ ಜಾರಿಯಲ್ಲಿನ ವಿಳಂಬ ಇನ್ನೂ ಮೊದಲಾದ ಕಾರಣಗಳಿವೆ.

ಭಾರತ ಸರ್ಕಾರವು ಮಹಿಳೆಯರಿಗೆ ರಾಜಕೀಯದ ಮೂಲಕ ಸಬಲೀಕರಣ ಮಾಡಲು ಸ್ಥಳೀಯ ಮಟ್ಟದ ಆಡಳಿತ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ನೀಡಿತು. ಇದರಿಂದ ಮಹಿಳೆಯರು ಸಮಾಜದ ಮುಖ್ಯವಾಹಿನಿಗೆ ಬರುವಂತಾಯಿತು. ಆದರೆ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಮೊದಲಾದ ಸಮಸ್ಯೆಗಳಿಂದ ಮುಂದೆ ಬರಲು ಇನ್ನೂ ಸಾಧ್ಯವಾಗುತ್ತಿಲ್ಲ. ಇಂತಹ ಸಂದರ್ಭದಲ್ಲಿ ನಬಾರ್ಡ ಮಹಿಳೆಯರನ್ನು ಸಬಲೀಕರಣಗೊಳಿಸಲು ಸ್ವ-ಸಹಾಯ ಸಂಘಗಳನ್ನು ರಚಿಸಬೇಕೆಂದು ತಿಳಿಸಿದ್ದಲ್ಲದೆ. ಅದಕ್ಕಾಗಿ ಹಣಕಾಸಿನ ನೆರವನ್ನೂ ನೀಡಿತು. ಸರ್ಕಾರಗಳೂ ಸಹ ಈ ನಿಟ್ಟಿನಲ್ಲಿ ಪ್ರಯತ್ನಗಳನ್ನು ಕೈಗೊಂಡವು. ಅದಕ್ಕಾಗಿ ಡ್ವಕ್ರಾ, ಸ್ವಧಾರ, ಸ್ವಯಂ ಸಿದ್ಧ ಯೋಜನೆ, ಸ್ತ್ರೀ ಶಕ್ತಿ ಯೋಜನೆಯಂತಹ ಹಲವಾರು ಯೋಜನೆಗಳನ್ನು ಜಾರಿಗೊಳಿಸುತ್ತಾ ಬರುತ್ತಿವೆ.

ಮಹಿಳಾ ಸಬಲೀಕರಣ ರಾಷ್ಟ್ರಗಳ ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಒಂದು ಕೇಂದ್ರೀಯ ವಿಷಯವಾಗಿದೆ. ಭಾರತ ಸಂವಿಧಾನದ ಮೂಲಕ ಮತ್ತು ವಿವಿಧ ಕಾಯ್ದೆಗಳ ಮೂಲಕ ಮಹಿಳಾ ಸಬಲೀಕರಣಕ್ಕೆ ಪ್ರಯತ್ನಿಸುತ್ತಾ ಬಂದಿದೆ. ಒಂಭತ್ತನೇ (೧೯೯೭–೨೦೦೨) ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಸಬಲೀಕರಣವನ್ನು ಒಂದು ಪ್ರಮುಖ ತತ್ವವನ್ನಾಗಿ ಅನುಮೋದಿಸಿತ್ತು ಮತ್ತು 2001ನೇ ವರ್ಷವನ್ನು ಮಹಿಳಾ ಸಬಲೀಕರಣ ವರ್ಷವೆಂದು ಘೋಷಿಸಿತು.[೧] ಈಗಾಗಲೇ ಮಹಿಳಾ

ಸಬಲೀಕರಣಕ್ಕೆ ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯನ್ನು ಸ್ಥಾಪಿಸಿರುವುದರ ಜೊತೆಗೆ ರಾಷ್ಟ್ರೀಯ ಮಹಿಳಾ ಆಯೋಗವನ್ನು ಮಹಿಳೆಯರ ಅಭಿವೃದ್ಧಿಗಾಗಿಯೆ ಸ್ಥಾಪಿಸಲಾಯಿತು. ರಾಜ್ಯ ಸರ್ಕಾರಗಳು ಆಯೋಗಗಳನ್ನು ಸ್ಥಾಪಿಸಿದ್ದಲ್ಲದೆ ರಾಷ್ಟ್ರೀಯ ಮಹಿಳಾ ಕೋಶ, ಇಂದಿರಾ ಮಹಿಳಾ ಯೋಜನಾ, ಮಹಿಳಾ ಸಮೃದ್ಧಿ ಯೋಜನೆ, ಸ್ತ್ರೀ ಶಕ್ತಿ ಯೋಜನೆಗಳನ್ನು ಜಾರಿಗೊಳಿಸಲಾಯಿತು. ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮೂರನೇ ಒಂದು ಭಾಗವನ್ನು ಮೀಸಲಿಡಲಾಯಿತು. ಆ ಮೂಲಕ ಸಾಮಾಜಿಕವಾಗಿ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸುಧಾರಣೆ ಮಾಡಲು ಪ್ರಯತ್ನಿಸಲಾಗುತ್ತಿದೆ. ಮಹಿಳಾ ಸಬಲೀಕರಣಕ್ಕೆ ಹಲವಾರು ಕಾರ್ಯಕ್ರಮಗಳ ಮೂಲಕ ಮಹತ್ತರವಾದ, ಅಗತ್ಯವಾದ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ಹೀಗೆ ಹಲವಾರು ಯೋಜನೆಗಳ ಫಲವಾಗಿ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಫಲವಾಗಿ ಸರ್ಕಾರ, ಬ್ಯಾಂಕುಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮತ್ತು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳಂತಹ ವ್ಯವಸ್ಥಿತ ಪ್ರಯತ್ನದ ಫಲವಾಗಿ ೯೦ ಲಕ್ಷಕ್ಕಿಂತ ಹೆಚ್ಚು ಮಹಿಳಾ ಸ್ವ ಸಹಾಯ ಗುಂಪುಗಳು ರಚಿತವಾಗಿದ್ದು, ಉಳಿತಾಯ ಮತ್ತು ಉದ್ಯೋಗದಲ್ಲಿ ನಿರತವಾಗಿದೆ. ಭಾರತ ಸರ್ಕಾರ ಸ್ವರ್ಣಜಯಂತಿ ಗ್ರಾಮೀಣ ಸ್ವ-ರೋಜಗಾರ್ ಯೋಜನೆ (ಎಸ್.ಜಿ.ಎಸ್.ವಾಯ್) ಯ ಮೂಲಕ ಸಂಘಗಳ ರಚನೆ ಮಾಡಲು ಉಳಿತಾಯವನ್ನು ಹೆಚ್ಚಿಸಿ ಉದ್ಯೋಗದಲ್ಲಿ ತೊಡಗುವಂತೆ ಮಾಡಲು ಸುತ್ತು ನಿಧಿ ಯನ್ನು ನೀಡಲು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಪ್ರಯತ್ನಿಸುತ್ತಾ ಬಂದಿದೆ. ಅದೇ ರೀತಿ ಕನಾಟಕ ಸರ್ಕಾರವು ಸ್ತ್ರೀ-ಶಕ್ತಿ ಗುಂಪುಗಳನ್ನು ರಚಿಸಿಕೊಳ್ಳಲು ಅನುವು ಮಾಡಿಕೊಟ್ಟಿದ್ದರ ಫಲವಾಗಿ ೧೯,೦೪೧೨೦ ಲಕ್ಷ ಮಹಿಳಯರು ಸದಸ್ಯತ್ವವನ್ನು ಹೊಂದಿದ್ದಾರೆ. ಒಟ್ಟು ೭೯೩೫ ಬ್ಯಾಂಕ್ ಖಾತೆಗಳನ್ನು ಬ್ಯಾಂಕುಗಳಲ್ಲಿ ಪ್ರಾರಂಬಿಸಿ ಬ್ಯಾಂಕುಗಳಲ್ಲಿ ಉಳಿತಾಯ ಮಾಡುತ್ತಾ ಉಳಿತಾಯಕ್ಕೆ ಅನುಗುಣವಾಗಿ ಸಾಲವನ್ನು ಪಡೆದುಕೊಂಡಿದ್ದಾರೆ. ಆದರೆ ಆದಾಯ ಗಳಿಸುವಂತಹ ಕ್ಷೇತ್ರದಲ್ಲಿ ಅದನ್ನು ತೊಡಗಿಸುವುದು ತುಂಬಾ ಕಡಿಮೆಯಾಗಿದೆ.

ಅಥಣಿ ತಾಲ್ಲೂಕಿನಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬ್ಯಾಂಕುಗಳು ಮತ್ತು ಸ್ವಯಂಸೇವಾ ಸಂಸ್ಥೆಗಳ ಫಲವಾಗಿ ೨೯೫ ಸಂಘಗಳು ರಚಿತವಾಗಿದ್ದು ೯,೬೫೦೦೦ ಉಳಿತಾಯ ಮಾಡಿವೆ ಮತ್ತು ಅಷ್ಟೇ ಪ್ರಮಾಣದಲ್ಲಿ ಸಾಲ ಸೌಲಭ್ಯಗಳನ್ನು ಪಡೆದುಕೊಂಡು ಹೈನುಗಾರಿಕೆ, ಚಿಕ್ಕ ವ್ಯಾಪಾರ ಮೊದಲಾದ ಉದ್ಯೋಗಗಳಲ್ಲಿ ತೊಡಗಿವೆ. ಪ್ರಾರಂಭದಲ್ಲಿ ಮಹಿಳೆಯರ ಸ್ವ-ಸಹಾಯ ಸಂಘಗಳು ಆರ್ಥಿಕ ಮತ್ತು ಸಾಮಾಜಿಕ ಸಶಕ್ತತೆಯ ಕಡೆ ಇದ್ದರೂ ಸದೃಢವಾಗಿರಲಿಲ್ಲ ಮಹಿಳೆಯರ ಗುಂಪುಗಳು ಸದೃಢವಾಗಿರಬೇಕಾದರೆ ವಿವಿಧ ಸಂಘ ಸಂಸ್ಥೆಗಳ ಸಹಕಾರ ಮತ್ತು ಸಹಯೋಗ ಬಹಳ ಮುಖ್ಯ. ಅದಕ್ಕಿಂತ

ಹೆಚ್ಚಾಗಿ, ರಚಿತವಾದ ಸ್ವ-ಸಹಾಯ ಸಂಘಗಳಿಗೆ ಉಳಿತಾಯ, ಹಣಕಾಸು ನಿರ್ವಹಣೆ, ಸಾಲ ಸೌಲಭ್ಯ, ಉದ್ಯೋಗ ಮತ್ತು ಮಾರುಕಟ್ಟೆ ನಿರ್ವಹಣೆಗೆ ಸೂಕ್ತ ತರಬೇತಿ ನೀಡಿ ಮೇಲ್ವಿಚಾರಣೆ ಮಾಡಬೇಕಾಗಿದೆ.

## ೫.೨ ಸಂಶೋಧನೆಯಿಂದ ಕಂಡುಕೊಂಡ ಅಂಶಗಳು

### ೫.೨.೧ ವಯಸ್ಸು

ಸಂಘವು ಸಮಾನ ವಯಸ್ಕರಿಂದ ಕೂಡಿದವರಿಂದ ರಚಿತವಾಗಿರಬೇಕು ಮತ್ತು 30 ವರ್ಷ ವಯಸ್ಸಿನ ಒಳಗಿರಬೇಕು. ಇದರಿಂದ ಚಟುವಟಿಕೆಯಿಂದ ಕೂಡಿದ ಸಂಘಗಳು ರಚಿತವಾಗುತ್ತವೆ. ಹೊಸ ಹೊಸ ಉದ್ಯೋಗಗಳನ್ನು ಕೈಗೊಳ್ಳುತ್ತವೆ. ಆದರೆ ೪೦ ವರ್ಷ ಮೇಲ್ಪಟ್ಟವರ ಪ್ರಮಾಣ ಶೇಕಡ ೩೮ ರಷ್ಟಿದೆ. ಇಂತಹ ಮಹಿಳಾ ಸದಸ್ಯರು ಕೇವಲ ಸಾಲಕ್ಕಾಗಿ ಸಂಘವನ್ನು ರಚಿಸಿಕೊಂಡವರಾಗಿದ್ದಾರೆ.

### ೫.೨.೨ ಸಾಕ್ಷರತೆ

ಸಾಕ್ಷರತೆ ಸಂಘಗಳ ಬೆಳವಣಿಗೆಯಲ್ಲಿ ಕೇಂದ್ರೀಯ ಪಾತ್ರವಹಿಸಬಲ್ಲದು. ಇದರಿಂದ ಸಂಘಗಳಲ್ಲಿನ ವ್ಯವಹಾರಗಳನ್ನು ತಿಳಿದು ಕೊಳ್ಳಲು ಸಾಧ್ಯವಾಗುತ್ತದೆ. ಸಂಘದಲ್ಲಿ ಯಾವುದೇ ಮೋಸ ಮಾಡುವಂತಹ ಘಟನೆಗಳು ನಡೆಯುವುದಿಲ್ಲ. ಆದ್ದರಿಂದ ಕನಿಷ್ಟ ಅರ್ಧಕ್ಕಿಂತ ಹೆಚ್ಚು ಸದಸ್ಯರು ಸಾಕ್ಷರಸ್ಥರಾಗಿರಬೇಕು. ಸಂದರ್ಶನಕ್ಕೆ ಒಳಪಡಿಸಿಕೊಂಡ ಸದಸ್ಯರಲ್ಲಿ ಶೇಕಡ ೬೨ ರಷ್ಟು ಸದಸ್ಯರು ಅನಕ್ಷರಸ್ಥರಾಗಿದ್ದಾರೆ.

### ೫.೨.೩ ಸಂಘದ ರಚನೆ

ಸಂಘದ ರಚನೆಯು ವೈವಿಧ್ಯತೆಯಿಂದ ಕೂಡಿರಬೇಕು. ನಿರ್ದಿಷ್ಟ ಉದ್ದೇಶವನ್ನು ಒಳಗೊಂಡು ರಚಿತವಾಗಿರಬೇಕು. ಆದರೆ ರಚಿತವಾಗಿರುವ ಬಹುತೇಕ ಸಂಘಗಳು ಸಾಲ ಸೌಲಭ್ಯ ದೊರೆಯುತ್ತವೆ ಎನ್ನುವ ಒಂದೇ ಕಾರಣಕ್ಕೆ ಸಂಘಗಳನ್ನು ರಚಿಸಿಕೊಂಡಿವೆ. ಹೆಸರಿಗೆ ಮಾತ್ರ ಉಳಿತಾಯ, ಉದ್ಯೋಗವಾಗಿದೆ. ಸಾಲ ಸೌಲಭ್ಯದ ಉದ್ದೇಶವನ್ನು ಇಟ್ಟುಕೊಂಡು ರಚಿತವಾದ ಸಂಘಗಳ ಪ್ರಮಾಣ ಶೇಕಡ ೪೧.೩ ರಷ್ಟಿರುವುದನ್ನು ನೋಡಿದರೆ ಅದು ತಿಳಿದು ಬರುತ್ತದೆ. ರಚಿತವಾದ ಸಂಘಗಳಲ್ಲಿ ಒಂದೇ ಜಾತಿಗೆ

ಸೇರಿದವರಿಂದ ಕೂಡಿವೆ. ಆದರೆ ವಿವಿಧ ಜಾತಿಯವರನ್ನು ಒಳಗೊಂಡು ರಚಿತವಾದರೆ ಜಾತಿ ವ್ಯವಸ್ಥೆಯನ್ನು ನಿವಾರಿಸಬಹುದು. ಆದರೆ ಬಹುತೇಕ ಸಂಘಗಳು ಸರಿಯಾದ ನಿರ್ವಹಣೆ ಇಲ್ಲದೆ ಮುರಿದು ಬಿದ್ದಿವೆ.

### ೫.೨.೪ ಸಂಘದಿಂದ ಆಗಿರುವ ಪ್ರಯೋಜನಗಳು

ಸಂಘದ ರಚನೆಯು ಗ್ರಾಮೀಣ ಮಹಿಳೆಯರ ಬದುಕಿನಲ್ಲಿ ಬಹಳಷ್ಟು ಬದಲಾವಣೆಯನ್ನು ತಂದಿದೆ. ಗ್ರಾಮೀಣ ಪ್ರದೇಶಲ್ಲಿನ ಮಹಿಳೆಯರು ತಮ್ಮ ಕುಟುಂಬದ ನಿರ್ವಹಣೆಯನ್ನು ಮಾಡುವ ಸಂದರ್ಭದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಳು. ಅದರಲ್ಲಿ ಹಣಕಾಸಿನ ಸಮಸ್ಯೆ ಒಂದು. ಜೊತೆಗೆ ಹಲವಾರು ಕುಟುಂಬದಲ್ಲಿ ಗೌರವವು ಸಿಗುತ್ತಿರಲ್ಲಿಲ್ಲ. ಇಂತಹ ಸಮಯದಲ್ಲಿ ಸಂಘದ ರಚನೆಯು ಅವರಿಗೆ ಆನೆಯ ಬಲವನ್ನು ನೀಡಿದೆ. ಕುಟುಂಬದ ಸಮಸ್ಯೆಗಳ ನಿವಾರಣೆಗೆ ಪ್ರಯೋಜನವಾಗಿದೆ. ಶೋಷಣೆಮಾಡುತ್ತಿದ್ದ ಕೆಲ ಪುರುಷರು ಅದನ್ನು ಕಡಿಮೆ ಮಾಡಿದ್ದಾರೆ. ಆದರೆ ಇನ್ನೂ ಸಹ ಕೆಲವೇ ಸಂಘಗಳನ್ನು ಬಿಟ್ಟು ಇತರೆ ಸಂಘಗಳು ಉದ್ಯೋಗದಲ್ಲಿ ತೊಡಗಿಕೊಂಡಿಲ್ಲ. ಉದಾರೀಕರಣ, ಖಾಸಗೀಕರಣದ ಈ ಸಂದರ್ಭದಲ್ಲಿ ಸಂಘಗಳಿಂದ ಉತ್ಪಾದಿತವಾದ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ಸ್ಪರ್ಧೆಗಳನ್ನು ಎದುರಿಸಬೇಕಾದ ಚೈತನ್ಯವಿಲ್ಲದಿರುವುದರಿಂದ ಬಹುತೇಕ ಸಂಘಗಳು ಉತ್ಪಾದಿತ ಉದ್ಯೋಗದಲ್ಲಿ ತೊಡಗುವುದರಲ್ಲಿ ನಿರಾಸಕ್ತಿವಹಿಸುತ್ತಿವೆ.

### ೫.೨.೫ ಸಂಘದಲ್ಲಿನ ಉಳಿತಾಯ

ಸಂಘವನ್ನು ರಚಿಸಿಕೊಂಡ ಮಹಿಳೆಯರು ಸಕಾಲಕ್ಕೆ ಸರಿಯಾಗಿ ಉಳಿತಾಯವನ್ನು ಮಾಡುತ್ತಿದ್ದಾರೆ. ಆದರೆ ಮಹಿಳೆಯರು ಹೆಚ್ಚು ಸಬಲರಾಗಬೇಕಾದರೆ, ಸಂಘದಲ್ಲಿ ತಮ್ಮ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರಗಳನ್ನು ಕಂಡುಕೊಳ್ಳಬೇಕು. ಸಂಘದಲ್ಲಿನ ವ್ಯವಹಾರಗಳನ್ನು, ಉಳಿತಾಯವನ್ನು, ಆದಾಯವನ್ನು ತಿಳಿದುಕೊಳ್ಳಬೇಕು. ಆದರೆ ಯಾರೂ ಇದರ ಬಗ್ಗೆ ಗಮನಹರಿಸುವುದಿಲ್ಲ. ಇದರಿಂದ ಸಂಘದ ಕೆಲ ಸದಸ್ಯರು ಸಂಘದ ಹಣವನ್ನು ಹೆಚ್ಚಿನ ಬಡ್ಡಿಗೆ ನೀಡಿ ಆದಾಯ ಮಾಡಿಕೊಳ್ಳುತ್ತಿದ್ದಾರೆ. ಉಳಿತಾಯದ ಹಣವನ್ನು ಸಕಾಲಕ್ಕೆ ಬ್ಯಾಂಕಿಗೆ ತುಂಬದೆ ತಡವಾಗಿ ತುಂಬುತ್ತಿದ್ದಾರೆ. ಆದ ಕಾರಣ ಸಂಘಗಳ ನಿರ್ವಹಣೆ ಸರಿಯಾಗಿಲ್ಲವೆಂದು ಬ್ಯಾಂಕುಗಳು ಸಕಾಲಕ್ಕೆ ಸಾಲವನ್ನು ನೀಡಲು ಹಿಂಜರಿಯುತ್ತಿವೆ.

### ೫.೨.೬ ಸದಸ್ಯರ ತಿಂಗಳ ಆದಾಯ

ಸಂಘವನ್ನು ರಚಿಸಿಕೊಂಡ ಪ್ರಾರಂಭದಲ್ಲಿ ಸದಸ್ಯರು ತುಂಬಾ ಕಡಿಮೆ ಆದಾಯವನ್ನು ಹೊಂದಿದ್ದರು. ಆದರೆ ಸಂಘವನ್ನು ರಚಿಸಿಕೊಂಡು ಒಂದು ವರ್ಷದ ನಂತರ ಸಂಘದಲ್ಲಿ ಸಾಲ ಸೌಲಭ್ಯ, ಉಳಿತಾಯ, ಹೈನುಗಾರಿಕೆಯಂತಹ ಉದ್ಯೋಗದಿಂದ ಹೆಚ್ಚು ಆದಾಯವನ್ನು ಗಳಿಸುತ್ತಿದ್ದಾರೆ. ಆದರೆ ಕೇವಲ ಉಳಿತಾಯಕ್ಕೆ ಸೀಮಿತವಾಗಿರುವ ಸಂಘಗಳು ಇನ್ನೂ ಯಾವುದೇ ಆದಾಯವನ್ನು ಕಾಣುತ್ತಿಲ್ಲ.

### ೫.೨.೭ ಸದಸ್ಯರ ತಿಂಗಳ ಖರ್ಚು

ಸಂಘಗಳನ್ನು ರಚಿಸಿಕೊಂಡು ಉತ್ತಮ ನಿರ್ವಹಣೆಯನ್ನು ಹೊಂದಿರುವ ಸಂಘಗಳು ತಮ್ಮ ಕೌಟುಂಬಿಕ ವೆಚ್ಚದಲ್ಲಿಯೂ ಹೆಚ್ಚಳ ಮಾಡಿಕೊಂಡಿವೆ. ಇದು ಆಶಾದಾಯಕವಾಗಿ ಕಂಡುಬಂದರೂ, ಉತ್ಪಾದನಾಚಟುವಟಿಕೆಯಲ್ಲಿ ತೊಡಗದೇ ಖರ್ಚು ಮಾಡುವುದು ಸಂಘದ ಅವನತಿಗೆ ಕಾರಣವಾಗುತ್ತಾ ಈ ಕಾರಣದಿಂದಲೇ ಸಂಘಗಳು ಮುರಿದು ಬೀಳುತ್ತಿವೆ. ಏಕೆಂದರೆ ಉಳಿತಾಯಕ್ಕಿಂತ ಖರ್ಚು ಹೆಚ್ಚಾದರೆ ಸಂಘದಲ್ಲಿ ಪಡೆದ ಸಾಲದ ಹಣವನ್ನು ಸಕಾಲಕ್ಕೆ ತುಂಬಲು ಆಗುವುದಿಲ್ಲ. ಇದರಿಂದ ಹಳ್ಳಿಗಳಲ್ಲಿ ಸಂಘದ ಸದಸ್ಯರಲ್ಲಿ ಮನಸ್ತಾಪ ಉಂಟಾಗಿ ಕೈಕೈ ಮಿಲಾಯಿಸುವುದು ಸಾಮಾನ್ಯವಾಗಿದೆ.

### ೫.೨.೮ ತರಬೇತಿ

ಸಂಘಗಳ ಸದೃಡತೆಗೆ ಸಕಾಲಕ್ಕೆ ಸರಿಯಾದ ತರಬೇತಿ ಅಗತ್ಯ. ಆದರೆ ಡಿ.ಸಿ.ಸಿ, ಬ್ಯಾಂಕ್, ಮಲಪ್ರಭಾ ಬ್ಯಾಂಕ್‌ಗಳು ರಚಿಸಿರುವ ಸಂಘಗಳಿಗೆ ಇದುವರೆಗೆ ತರಬೇತಿಯೇ ದೊರೆತಿಲ್ಲ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಪ್ರಾರಂಭದಲ್ಲಿ ಸರಿಯಾಗಿ ತರಬೇತಿ ನೀಡಿದರೂ, ತದನಂತರ ದಾಖಲೆಗಳಲ್ಲಿ ಮಾತ್ರ ತರಬೇತಿ ನೀಡಿದೆ. ಅಲ್ಲದೆ. ತರಬೇತಿಗಾಗಿ ಪ್ರತಿ ಮಹಿಳೆಗೆ ಪ್ರಯಾಣ, ಊಟ ಭತ್ಯೆಗಾಗಿ ನೀಡಿದ ಹಣವನ್ನು ನೀಡಿರುವುದಿಲ್ಲ. ಇದರಿಂದ ಹಳ್ಳಿಯಿಂದ ಬರುವ ಸಂಘದ ಸದಸ್ಯರು ಹಣಕಾಸಿನ ತೊಂದರೆಯಿಂದ ತರಬೇತಿಗೆ ಸರಿಯಾಗಿ ಹಾಜರಾಗಲು ಆಗುತ್ತಿಲ್ಲ.

### ೫.೨.೯ ಸಹಾಯ ಧನ

ಸಂಘಗಳ ನಿರ್ವಹಣೆಗೆ ಸರ್ಕಾರವು ಸಂಘಗಳಿಗೆ ಸಹಾಯ ಧನವನ್ನು ನೀಡುತ್ತಿದೆ. ಆದರೆ ಅದರ ಅರ್ಥವೇ ಗೊತ್ತಿಲ್ಲದ ಸದಸ್ಯರು ಹಣವನ್ನು ಹಂಚಿಕೊಂಡಿದ್ದಾರೆ. ಇನ್ನೂ ಶೇಕಡ ೬೦ ರಷ್ಟು ಸಂಘದ ಸದಸ್ಯರಿಗೆ ಸರಿಯಾದ ಮಾಹಿತಿಯಿಲ್ಲದೆ, ನಿರ್ವಹಣೆಯಿಲ್ಲದೆ ಸಹಾಯಧನವನ್ನು ಪಡೆದುಕೊಂಡಿಲ್ಲ.

### ೫.೨.೧೦ ಸಭೆಯಲ್ಲಿ ಚರ್ಚಿಸಲ್ಪಡುವ ವಿಷಯಗಳು

ಸಂಘದ ರಚನೆಯ ನಂತರ ಸಭೆಗಳನ್ನು ನಡೆಸುವುದರ ಮೂಲಕ ಗ್ರಾಮದ, ಕುಟುಂಬದ ಹಾಗು ಸಂಘವನ್ನು ಹೆಚ್ಚು ಬಲಿಷ್ಠಗೊಳಿಸಲು ತಗೆದುಕೊಳ್ಳಬೇಕಾದ ಕ್ರಮಗಳು, ಉದ್ಯೋಗ, ಮಾರಾಟ ಮತ್ತು ಆದಾಯ ಮೊದಲಾದ ವಿಷಯಗಳ ಕುರಿತು ಚರ್ಚಿಸಬೇಕು. ಆದರೆ ಯಾವುದೇ ಸಂಘದ ಸದಸ್ಯರು ಕೇವಲ ಉಳಿತಾಯ ಮಾಡುತ್ತಿದ್ದಾರೆಯೇ ವಿನ: ಯಾವ ವಿಷಯದ ಬಗ್ಗೆಯು ಚರ್ಚಿಸುವುದಿಲ್ಲ. ಯಾವ ಸಂಸ್ಥೆಯೂ ಆ ನಿಟ್ಟಿನಲ್ಲಿ ಪ್ರಯತ್ನಿಸುತ್ತಲೂ ಇಲ್ಲ.

### ೫.೨.೧೧ ಸಾಲದ ನಿರ್ವಹಣೆ

ಸಂಘದಲ್ಲಿ ಸಾಲವನ್ನು ನೀಡುವಾಗ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಇಲ್ಲವಾದರೆ ಸಂಘದಲ್ಲಿ ಒಡಕುಂಟಾಗಿ ಸಂಘಗಳು ಮುರಿದು ಬೀಳುವುದಲ್ಲದೆ. ಸಾಮರಸ್ಯ ಹಾಳಾಗುತ್ತದೆ. ಸಾಲವನ್ನು ನೀಡುವಾಗ ಕೆಲವೊಂದು ನಿಯಮಗಳನ್ನು , ವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಆದರೆ ಸಾಲಕೇಳಿದವರಿಗೆ ಮತ್ತು ಯಾವುದೇ ವಿಧಾನಗಳಿಲ್ಲದೇ ಸಾಲವನ್ನು ನೀಡುತ್ತಿವೆ. ಇದೇ ಕಾರಣದಿಂದ ಅನಂತಪುರ ಗ್ರಾಮದಲ್ಲಿನ ಸಂಘಗಳು ಮುರಿದು ಹೋಗಿವೆ.

### ೫.೨.೧೨ ಸಾಲದ ಉದ್ದೇಶಗಳು

ಸಂಘದಲ್ಲಿ ಸಾಲವನ್ನು ನೀಡುವಾಗ ಸರಿಯಾದ ಉದ್ದೇಶಗಳನ್ನು ಹಾಕಿಕೊಂಡು ನೀಡಬೇಕು. ಆದರೆ ಬಹುತೇಕ ಸಂಘಗಳಲ್ಲಿ ಅನುತ್ಪಾದಕ ಚಟುವಟಿಕೆಗಳಿಗೇ ಹೆಚ್ಚು ಸಾಲವನ್ನು ನೀಡಿದ್ದಾರೆ. ಯಾವುದೇ

ಆದಾಯ ಮೂಲಗಳಿಲ್ಲದ ಕುಟುಂಬಗಳು ಮರುಪಾವತಿಯನ್ನು ಸಕಾಲಕ್ಕೆ ಮಾಡಲಾಗದೆ. ಇತರ ಸದಸ್ಯರಿಗೆ ಹಣಕಾಸಿನ ಅಗತ್ಯವಿರುವಾಗ ಸಾಲ ಸಿಗುತ್ತಿಲ್ಲ. ಇದರಿಂದ ಸಂಘದಿಂದ ಸದಸ್ಯರು ಹೊರ ನಡೆದಿದ್ದಾರೆ.

### ೫.೨.೧೩ ಸಾಲ ಮರುಪಾವತಿ

ಸಂಘಗಳು ವಿವಿಧ ಉದ್ದೇಶಗಳಿಗೆ ಪಡೆದುಕೊಂಡ ಸಾಲವನ್ನು ಅದೇ ಉದ್ದೇಶಕ್ಕೆ ಬಳಕೆ ಮಾಡಿಕೊಳ್ಳುತ್ತಿಲ್ಲ. ಮನೆಯ ನಿರ್ವಹಣೆಗೆ, ಮದುವೆಗೆ ಮೊದಲಾದ ಅನುತ್ಪಾದಕ ಕ್ಷೇತ್ರಕ್ಕೆ ಉಪಯೋಗಿಸುತ್ತಿವೆ. ಮಹಿಳೆಯರ ಮೇಲೆ ಪುರುಷರು ಒತ್ತಡ ತಂದು ಸಾಲವನ್ನು ಪಡೆದುಕೊಂಡು ಭೂಮಿಯಲ್ಲಿ ಆದಾಯ ಬರುವ ತನಕ ಮರಳಿ ತುಂಬಲು ಕೊಡುವುದಿಲ್ಲ. ಇದರಿಂದ ಬ್ಯಾಂಕುಗಳು, ಕೆಲ ಸಂಘಗಳು ಸಾಲವನ್ನು ಸಕಾಲಕ್ಕೆ ಮರುಪಾವತಿ ಮಾಡುತ್ತಿಲ್ಲವೆಂದು ಹೇಳುತ್ತಿವೆ. ಆದರೂ ಸಹ ಹೆಚ್ಚು ಸಂಘಗಳು ಅವಧಿ ಮುಂಚಿತವಾಗಿ ಸಾಲವನ್ನು ಮರುಪಾವತಿ ಮಾಡುತ್ತಿವೆ.

### ೫.೨.೧೪ ಸಂಘಗಳ ಸಮಸ್ಯೆಗಳು

ಸಂಘಗಳು ಉತ್ತಮವಾಗಿ ಸಮಯಕ್ಕೆ ಸರಿಯಾಗಿ ಉಳಿತಾಯ ಮಾಡುತ್ತವೆ. ಸಾಲವನ್ನು ಸಮಯಕ್ಕೆ ಸರಿಯಾಗಿ ಮರುಪಾವತಿ ಮಾಡುತ್ತವೆ ಎಂದ ಮಾತ್ರಕ್ಕೆ ಸಂಘಗಳು ಯಶಸ್ವಿಯಾದ ಸಂಘಗಳಾಗಿವೆ ಎಂದು ಹೇಳಲಾಗುವುದಿಲ್ಲ. ಇದರಿಂದ ಮಹಿಳೆಯರ ಸಬಲೀಕರಣ ಯಶಸ್ವಿಯಾಗಿದೆ ಎಂದು ತೀರ್ಮಾನಿಸುವುದು ತಪ್ಪಾಗುತ್ತದೆ. ಏಕೆಂದರೆ ಹಲವಾರು ಸಮಸ್ಯೆಗಳಿಂದ ಸಂಘಗಳು ಪರಿಪೂರ್ಣವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತಿಲ್ಲ. ಸಂಘಗಳ ಸದಸ್ಯರ ನಡುವೆ ಹೊಂದಾಣಿಕೆಯ ಕೊರತೆಯಿದೆ. ಪ್ರತಿನಿಧಿಗಳು, ಅಂಗನವಾಡಿ ಕಾರ್ಯಕರ್ತರು ಸಂಘದ ದಾಖಲೆಗಳನ್ನು ಬರೆಯಲು ಹಣವನ್ನು ಬೇಡುತ್ತಿದ್ದಾರೆ. ಸಂಘಗಳಲ್ಲಿ, ಉತ್ತಮ ಸ್ಥಿತಿಯಲ್ಲಿರುವ ಸದಸ್ಯರು ವಿವಿಧ ಸಮಸ್ಯೆಗಳನ್ನು ಉಂಟುಮಾಡುತ್ತಿದ್ದಾರೆ. ಸಾಲವನ್ನು ಪಡೆದುಕೊಳ್ಳಲು ಬಿಡುವುದಿಲ್ಲ.

### ೫.೨.೧೫ ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು

ಸ್ವ-ಸಹಾಯ ಸಂಘಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಂಬಂಧ ಉತ್ತಮವಾಗಿರಬೇಕು. ಸಂಘಗಳನ್ನು ರಚಿಸಿದ ಸಂಸ್ಥೆಗಳು ಸಂಘಗಳನ್ನು ಪದೇ ಪದೇ ಉಳಿತಾಯವನ್ನು ಹೇಗೆ ಮಾಡುತ್ತಿವೆ? ಸಂಘದ ದಾಖಲೆಗಳನ್ನು ಹೇಗೆ ನಿರ್ವಹಿಸುತ್ತಿವೆ? ಸಭೆಗಳನ್ನು ಸಕಾಲಕ್ಕೆ ಸರಿಯಾಗಿ ನಡೆಸುತ್ತಿವೆಯೇ?

ನಡೆಸುತ್ತಿದ್ದರೆ ಸಭೆಯಲ್ಲಿ ಯಾವ ಯಾವ ವಿಷಯಗಳನ್ನು ಚರ್ಚಿಸುತ್ತಿವೆ ಮತ್ತು ಚರ್ಚಿಸಿದ ವಿಷಯಗಳ ಮೇಲೆ ಹೇಗೆ ನಿರ್ಧಾರವನ್ನು ತೆಗೆದುಕೊಳ್ಳುತ್ತವೆ? ಎನ್ನುವುದನ್ನು ಪರಿಶೀಲನೆ ಮಾಡುತ್ತಿಲ್ಲ. ಸದಸ್ಯರಿಗೆ ಮಾಹಿತಿ ಬೇಕಾದರೆ ತಮ್ಮ ಕೆಲಸಗಳನ್ನು ಬದಿಗಿಟ್ಟು ಅಥಣಿಗೆ ಬರಬೇಕು. ಬಂದರೂ ಮಾಹಿತಿ ಪಡೆಯಬೇಕಾದರೆ ಕೆಲವು ಸಂಸ್ಥೆಗಳಿಗೆ ಹಣವನ್ನು ನೀಡಬೇಕು. ಬ್ಯಾಂಕುಗಳು ಮತ್ತು ವಿವಿಧ ಯೋಜನೆಗಳ ಮೂಲಕ ಸಾಲ ಕೊಡಿಸುವಾಗ ಸ್ವಲ್ಪ ಹಣವನ್ನು ಸಂಸ್ಥೆಗೆ ಕೊಡಬೇಕಾಗಿದೆ.

## ೫.೩ ಸಲಹೆಗಳು

೧. ಸಂಘವು ಯಾಶಸ್ವಿಯಾಗಬೇಕಾದರೆ ಸಮಾನ ವಯಸ್ಕರನ್ನು ಒಳಗೊಂಡು ರಚನೆಯಾಗಬೇಕು. ೩೦ ವರ್ಷ ಒಳಗಿನ ವಯಸ್ಸಿನವರಿರಬೇಕು. ಇದರಿಂದ ತಮ್ಮ ಜವಾಬ್ದಾರಿ, ಉದ್ದೇಶಗಳನ್ನು ಅರಿತುಕೊಂಡು ಮುನ್ನಡೆಯಲು ಸಾಧ್ಯವಾಗುತ್ತದೆ

೨. ಸಂಘವನ್ನು ರಚಿಸುವಾಗ ಇಲ್ಲವೆ ರಚಿಸಿಕೊಳ್ಳುವಾಗ ಕನಿಷ್ಟ ೪ ಸದಸ್ಯರಾದರೂ ಸಾಕ್ಷರಸ್ತರಿರಬೇಕು. ಇದರಿಂದ ಸಂಘದಲ್ಲಿ ಸುಳ್ಳು ದಾಖಲೆಗಳ ರಚನೆ ತಪ್ಪುತ್ತದೆ.

೩. ಸಂಘದಲ್ಲಿ ಸಕಾಲಕ್ಕೆ ಉಳಿತಾಯವನ್ನು ಮಾಡಬೇಕು. ಉಳಿತಾಯದ ಪ್ರಮಾಣವನ್ನು ೧೦ ರೂ ನಿಂದ ೨೦ ರೂಗಳಿಗೆ ಹೆಚ್ಚಿಸಿಕೊಂಡರೆ ಬೇಗ ಸಂಘದ ಉಳಿತಾಯ ಹೆಚ್ಚುತ್ತದೆ. ಅದರಿಂದ ಬೇಗನೆ ಸಾಲ ಸೌಲಭ್ಯವನ್ನು ಪಡೆಕುಕೊಳ್ಳಬಹುದು.

೪. ಸಂಘವನ್ನು ರಚಿಸಿಕೊಂಡಿರುವುದು ಉಳಿತಾಯ ಮಾಡುವುದಕ್ಕೆ ಎನ್ನುವ ಭಾವನೆ ಹೊಂದಿರಬೇಕು. ಉಳಿತಾಯಕ್ಕಿಂತ ಖರ್ಚು ಹೆಚ್ಚಿರಬಾರದು. ಉಳಿತಾಯದ ಆಧಾರದ ಮೇಲೆ ಸಾಲವನ್ನು ನೀಡಬೇಕು

೫. ಸಂಸ್ಥೆಗಳು ಸಂಘಗಳಿಗೆ ಸಕಾಲಕ್ಕೆ ಸರಿಯಾಗಿ ತರಬೇತಿಯನ್ನು ನೀಡಬೇಕು. ತರಬೇತಿಯಿಂದ ತಿಳಿದುಕೊಂಡ ಸಂಘಗಳ ಪರಿಪೂರ್ಣ ತಿಳುವಳಿಕೆಯನ್ನ ಸಂಸ್ಥೆಗಳು ಕಾಲಕಾಲಕ್ಕೆ ಪರೀಕ್ಷೆಗೆ ಒಳಪಡಿಸಬೇಕು.

೬. ಉದ್ಯೋಗದಲ್ಲಿ ತೊಡಗಿರುವ ಸಂಘಗಳಿಗೆ ಇತರೆ ಸಂಘಗಳನ್ನು ಭೇಟಿ ಮಾಡಿಸಬೇಕು. ಸ್ವಯಂ ಸೇವಾ ಸಂಸ್ಥೆಗಳು ತಾವೆ ಜವಾಬ್ದಾರಿ ಹೊತ್ತು ಪ್ರಾರಂಭದಲ್ಲಿ ಸಂಘಗಳಿಂದ ಉತ್ಪಾದಿತವಾದ

ವಸ್ತುಗಳನ್ನು ಮಾರಾಟ ಮಾಡಿಕೊಡಬೇಕು. ಮಾರಾಟ ಮಾಡುವಾಗ ಸಂಬಂಧಿಸಿದ ಸಂಘದ ಸದಸ್ಯರನ್ನು ಮುಖಾಮುಖಿಯಾಗಿ ಇಟ್ಟುಕೊಳ್ಳುವುದರಿಂದ ನೇರವಾಗಿ ಅವರಿಗೆ ವ್ಯಾವಹಾರಿಕ ಅನುಭವ ಉಂಟಾಗುತ್ತದೆ.

೭. ಸಾಲವನ್ನು ನೀಡುವಾಗ ಸಂಘದಲ್ಲಿ ಸದಸ್ಯರು ಉದ್ಯೋಗಕ್ಕೆ ೮೦% ಆರೋಗ್ಯಕ್ಕೆ ೭%, ಮನೆಯ ನಿರ್ವಹಣೆಗೆ ೭% ಮತ್ತು ಆಪತ್ಕಾಲಕ್ಕೆ ೬% ರಷ್ಟು ಹೀಗೆ ಹಣವನ್ನು ವಿಭಜಿಸಿಕೊಂಡು ಸಾಲವನ್ನು ನೀಡಬೇಕು.

೮. ಸಾಲವನ್ನು ಯಾವ ಉದ್ದೇಶಕ್ಕೆ ಪಡೆದುಕೊಂಡಿರುತ್ತಾರೊ ಅದೇ ಉದ್ದೇಶಕ್ಕೆ ಬಳಸಿಕೊಳ್ಳುವಂತೆ ಸಂಘಗಳನ್ನು ರಚಿಸಿದ ಸಂಸ್ಥೆಗಳು ನೋಡಿಕೊಳ್ಳಬೇಕು.

೯. ಸ್ವಯಂ ಸೇವಾ ಸಂಸ್ಥೆಗಳು ನಿಷ್ಪಕ್ಷಪಾತವಾಗಿ, ಪ್ರಾಮಾಣಿಕವಾಗಿ ಸೇವೆ ಸಲ್ಲಿಸಬೇಕು.

೧೦.ಸರ್ಕಾರಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಯೋಜನೆಗಳನ್ನು ಜಾರಿಗೊಳಿಸಬೇಕು. ಅವುಗಳ ನಿರ್ವಹಣೆಗಾಗಿ ಅಗತ್ಯ ನೆರವನ್ನು ನೀಡಬೇಕು. ಇದರಿಂದ ಸಂಸ್ಥೆಗಳು ಉತ್ತಮವಾಗಿ ತಮ್ಮ ಜವಾಬ್ದಾರಿಯನ್ನು ಅರಿತು ಕೆಲಸ ಮಾಡುತ್ತವೆ. ಏಕೆಂದರೆ ಸಂಸ್ಥೆಗೆ ಯಾವುದೇ ಆದಾಯ ಮೂಲಗಳಿಲ್ಲದಿದ್ದರೆ, ಸಂಸ್ಥೆಗಳಲ್ಲಿ ದುಡಿಯುವವರಿಗೆ ವೇತನವನ್ನು ನೀಡಲಾಗುವುದಿಲ್ಲ. ಮಹಿಳಾ ಸಂಘಗಳಿಂದ ಹಣ ಸಂಗ್ರಹಣೆ ತಪ್ಪುತ್ತದೆ.

೧೧.ಸಂಘವನ್ನು ರಚಿಸಿಕೊಳ್ಳುವಾಗ ನಿಬಂಧನೆಗಳ ಮೇಲೆ ರಚಿಸಿಕೊಳ್ಳಬೇಕು. ಇದರಿಂದ ಸಂಘಗಳು ಮುರಿದು ಬೀಳುವುದಿಲ್ಲ.

**೫.೩ ಉಪಸಂಹಾರ**

ಸಂಘಗಳು ಅಭಿವೃದ್ಧಿಯ ಸಂಕೇತಗಳಾಗಿವೆ. ಸರ್ಕಾರಗಳು ವಿವಿಧ ಯೋಜನೆಗಳಿಗೆ ಹಣವನ್ನು ಖರ್ಚು ಮಾಡುವುದನ್ನು ಕಡಿಮೆ ಮಾಡಬೇಕಾದರೆ. ಮೊದಲು ಸಂಘಗಳ ರಚನೆಗೆ ಮತ್ತು ಅವುಗಳ ಬಲಿಷ್ಠತೆಗೆ ಒತ್ತು ನೀಡಬೇಕು. ಇವೇ ರಾಷ್ಟ್ರದ ಸಮಸ್ಯೆಗಳಿಗೆ ಪರಿಹಾರ ವ್ಯವಸ್ಥೆಯಾಗಿವೆ. ಸಂಘಗಳ ಸಬಲೀಕರಣದಿಂದ ಎಲ್ಲರಿಗೂ ಉದ್ಯೋಗವನ್ನು ಸೃಷ್ಟಿಸಬಹುದು. ಆ ಮೂಲಕ ರಾಷ್ಟ್ರದ ನಿರುದ್ಯೋಗ, ಬಡತನದಂತಹ ಸಮಸ್ಯೆಗಳಿಗೆ ಉತ್ತಮ ಪರಿಹಾರವನ್ನು ಕಂಡುಕೊಳ್ಳಬಹುದು.

ಅನುಬಂಧ-೧

ಅಭಿವೃದ್ಧಿ ಅಧ್ಯಯನ
ವಿಭಾಗದಲ್ಲಿ ಎಂಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ
ಪಡಿಸಿರುವ ಸಂಶೋಧನಾ ಸಂಪ್ರಬಂಧದ ಸಂದರ್ಶನ ಅನುಸೂಚಿ

ವಿಷಯ: "ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕು ಸ್ವ-ಸಹಾಯ ಸಂಘಗಳು"

ಭಾಗ – ೧

**I. ವೈಯಕ್ತಿಕ ವಿವರಗಳು:**

೧. ಸಂದರ್ಶಿತರ ಹೆಸರು :

೨. ವಿಳಾಸ :

| ಗ್ರಾಮ | ಗ್ರಾಮ ಪಂಚಾಯತಿ | ತಾಲ್ಲೂಕು | ಜಿಲ್ಲೆ |
|---|---|---|---|
| | | | |

೩. ವಯಸ್ಸು :

೪. ಶಿಕ್ಷಣ :

| ಪ್ರಾಥಮಿಕ | V | X | XI | P.U. | ಪದವಿ | ಸ್ನಾತಕೋತ್ತರ | ತಾಂತ್ರಿಕ | ಇತರೆ | ಅನಕ್ಷರಸ್ಥ |
|---|---|---|---|---|---|---|---|---|---|
| | | | | | | | | | |

೫. ವೃತ್ತಿ :

| ಕೃಷಿ | ಕೂಲಿ | ವ್ಯಾಪಾರ | ಸರ್ಕಾರಿ ನೌಕರಿ | ಇತರೆ |
|---|---|---|---|---|
| | | | | |

೦೬. ಪದನಾಮ (ಸರ್ಕಾರಿಯಾಗಿದ್ದರೆ) :

೦೭: ಮಾಸಿಕ ವೇತನ :

**II. ಸಾಮಾಜಿಕ ವಿವರಗಳು:**

೮. ಜಾತಿ :

೯. ಧರ್ಮ :

| ಹಿಂದೂ | ಮುಸ್ಲಿಂ | ಕ್ರಿಶ್ಚಿಯನ್ | ಇತರೆ |
|---|---|---|---|
| | | | |

೧೦. ಲಿಂಗ :

| ಸ್ತ್ರೀ | ಪುರುಷ |
|---|---|
| | |

೧೧. ಭಾಷೆ :

| ಕನ್ನಡ | ಹಿಂದಿ | ಮರಾಠಿ | ತೆಲುಗು | ಇತರೆ |
|---|---|---|---|---|
| | | | | |

೧೨. ಕುಟುಂಬ :

| ವಿಭಕ್ತ | ಅವಿಭಕ್ತ |
|---|---|
| | |

೧೩. ವೈವಾಹಿಕ ಅಂತಸ್ತು:

| ವಿವಾಹಿತೆ/ತ | ಅವಿವಾಹಿತೆ/ತ | ವಿಚ್ಛೇದಿತ/ತೆ | ವಿಧುರ/ ವಿಧವೆ |
|---|---|---|---|
| | | | |

೧೪. ಕುಟುಂಬದ ಸದಸ್ಯರ ವಿವರ:

| ಕ್ರ. ಸ. | ಹೆಸರು | ಸಂಬಂಧ | ವಯಸ್ಸು | ಲಿಂಗ | ವೈವಾಹಿಕ | ಶಿಕ್ಷಣ | ವೃತ್ತಿ | ಆದಾಯ |
|---|---|---|---|---|---|---|---|---|
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |

೧೫.ಆಸ್ತಿಯ ವಿವರ:

| ಪ್ರಮಾಣ | ಪಿತ್ರಾರ್ಜಿತ | ಗೇಣಿ | ನೀರಾವರಿ | ಖಣ ಭೋಲಿ |
|---|---|---|---|---|
| 0 | | | | |
| $5^+$ | | | | |
| $10^+$ | | | | |
| $25^+$ | | | | |
| $50^+$ | | | | |

೧೬. ವಾಸದ ಬಗ್ಗೆ ವಿವರ

| :ವಿವರ | ಗುಡಿಸಲು | ಪಕ್ಕ | ತಾರಸಿ |
|---|---|---|---|
| ಸ್ವಂತ | | | |
| ಬಾಡಿಗೆ | | | |
| ಅನುದಾನ | | | |
| ಪಿತ್ರಾರ್ಜಿತ | | | |

೧೭. ಮನೆಯ ವಸ್ತುಗಳ ವಿವರ:

| ಟಿವಿ | ಸೀಡಿ | ಕಂಪ್ಯೂಟರ್ | ಫೋನ್ | ರೇಡಿಯೋ | ಮೊಬೈಲ್ | ಬೈಕ್ | ಕಾರು | ಟ್ರ್ಯಾಕ್ಟರ್ | ಆಟೋ | ಫ್ರಾಜ್ | ಇತರೆ |
|---|---|---|---|---|---|---|---|---|---|---|---|
| | | | | | | | | | | | |

ಭಾಗ – ೨

III. ಸ್ವ-ಸಹಾಯ ಸಂಘಗಳಿಗೆ ಸಂಬಂಧಿಸಿದ ಪ್ರಶ್ನೆಗಳು

೧೮ಸಂಘದಲ್ಲಿ ಎಷ್ಟು ಸದಸ್ಯರಿದ್ದಾರೆ?

೧೯ ಸಂಘದಲ್ಲಿ ಎಷ್ಟು ಅಕ್ಷರಸ್ಥ ಮತ್ತು ಅನಕ್ಷರಸ್ಥರಿದ್ದಾರೆ ?

೨೦ ಸಂಘವನ್ನು ರಚಿಸಿಕೊಳ್ಳಲು ಕಾರಣಗಳೇನು ?

೨೧ ಸಂಘವನ್ನು ಯಾರ ಅಡಿಯಲ್ಲಿ ರಚಿಸಿಕೊಂಡಿದ್ದೀರಿ?

೨೨ ಸಂಘದ ರಚನೆಯಿಂದ ಆಗಿರುವ ಪ್ರಯೋಜನಗಳು ಯಾವುವು ?

೨೩ ಎಷ್ಟು ದಿನಗಳಿಗೊಮ್ಮೆ ಸಂಘದ ಸಭೆಯನ್ನು ನಡೆಸುತ್ತೀರಿ?

೧. ವಾರಕ್ಕೆ ಒಂದು ಬಾರಿ ☐ ೨. ಸಭೆ ಸೇರಬೇಕೆಂದಾಗ ☐

೩. ಹದಿನೈದು ದಿನಕ್ಕೆ ಒಂದು ಬಾ☐

೨೪ ಎಷ್ಟು ದಿನಗಳಿಗೊಮ್ಮೆ ಸಂಘದ ಸಭೆಯನ್ನು ನಡೆಸಿ ಉಳಿತಾಯ ಮಾಡುತ್ತೀರಿ ?

೧. ವಾರಕ್ಕೆ ಒಂದು ಬಾರಿ ೨. ಸಭೆ ಸೇರಬೇಕೆಂದಾಗ

೩. ಹದಿನೈದು ದಿನಕ್ಕೆ ಒಂದು ಬಾ☐

೨೫ ಸಂಘದಲ್ಲಿ ಉಳಿತಾಯ ಸಕಾಲಕ್ಕೆ ಆಗುತ್ತದೆಯೆ ? ಹಾದು/ ಇಲ್ಲ
ಇಲ್ಲ ಎಂದಾದರೆ ಅದಕ್ಕೆ ಕಾರಣ ತಿಳಿಸಿ.

೨೬ ಸಂಘದ ಸಭೆಗೆ ಎಲ್ಲಾ ಸದಸ್ಯರು ಹಾಜರಾಗುತ್ತಾರೆಯೇ? ಹೌದು/ ಇಲ್ಲ
ಇಲ್ಲ ಎಂದಾದರೆ ಕಾರಣ ತಿಳಿಸಿ

೨೭ ಸಂಘದ ಸಭೆಗಳಲ್ಲಿ ಚರ್ಚಿಸಲ್ಪಡುವ ವಿಷಯಗಳು ಯಾವುವು ಎನ್ನುವುದನ್ನು ತಿಳಿಸಿ ?

೨೮ ಸಂಘಗಳು ಪಡೆದುಕೊಂಡಿರುವ ತರಬೇತಿ ವಿಧಾನಗಳನ್ನು ತಿಳಿಸಿ ?

೨೯ ಸಂಘದಲ್ಲಿ ಸಾಲ ನೀಡುವ ವಿಧಾನಗಳನ್ನು ತಿಳಿಸಿ ?

೩೦ ಸಂಘಗಳು ಪಡೆದುಕೊಂಡಿರುವ ಸಾಲದ ಉದ್ದೇಶಗಳು ಮತ್ತು ಪ್ರಮಾಣವನ್ನು ತಿಳಿಸಿ ?

೩೧ ಸಂಘದ ಸದಸ್ಯರಿಂದ ಸಾಲ ಮರುಪಾವತಿಯು ಸಕಾಲಕ್ಕೆ ಆಗುತ್ತದೆಯೇ ? ಹೌದು/ಇಲ್ಲ

೩೨ ಇಲ್ಲ ಎಂದಾದರೆ ಅದಕ್ಕೆ ಕಾರಣಗಳನ್ನು ತಿಳಿಸಿ ?

೩೩ ಸಂಘವನ್ನು ಸೇರಿದ ಮೊದಲು ಮತ್ತು ನಂತರ ಸದಸ್ಯರ ತಿಂಗಳ ಆದಾಯ ಎಷ್ಟಿದೆ ?

೧. ೧೦೦ಕ್ಕಿಂತ ಕಡಿಮೆ ☐ ೨. ೧೦೦-೨೦೦ ☐ ೩. ೨೦೦-೩೦೦ ☐

೪. ೩೦೦-೪೦೦ ☐ ೫. ೪೦೦-೫೦೦ ☐ ೬. ೫೦೦-೬೦೦ ☐

೭. ೭೦೦ ಮೇಲ್ಪಟ್ಟು ☐

೩೪ ಸಂಘವನ್ನು ಸೇರಿದ ಮೊದಲು ಮತು ನಂತರದ ತಿಂಗಳ ಕುಟುಂಬದ ವೆಚ್ಚ ಎಷ್ಟಿದೆ ?

೧. ೧೦೦೦ ಕ್ಕಿಂತ ಕಡಿಮೆ ☐ ೨. ೧೦೦೦-೨೦೦೦ ☐ ೩.೨೦೦೦-೩೦೦೦ ☐

೩. ೩೦೦೦-೪೦೦೦ ☐ ೪. ೪೦೦೦-೫೦೦೦ ☐ ೫. ೫೦೦೦-೬೦೦೦ ☐

೭. ೭೦೦೦ ಮೇಲ್ಪಟ್ಟು ☐

೩೫ ಸಂಘವು ಸಹಾಯ ಧನ ಪಡಿದುಕೊಂಡಿದೆಯೇ ? ಹೌದು/ಇಲ್ಲ

೩೬ ಹೌದು ಎಂದಾದರೆ ಪ್ರಮಾಣವನ್ನು ತಿಳಿಸಿ?

೩೭ ಸಂಘದ ಸದಸ್ಯರಲ್ಲಿ ಹೊಂದಾಣಿಕೆ ಇದೆಯೇ? ಹೌದು/ಇಲ್ಲ

೩೮ ಇಲ್ಲ ಎಂದಾದರೆ ಅದಕ್ಕೆ ಕಾರಣ ತಿಳಿಸಿ

೩೯ ತಮ್ಮ ಸಂಘವು ಎದುರಿಸುತ್ತಿರುವ ಸಮಸ್ಯೆಗಳು ಯಾವುವು?

೪೦ ನಿಮ್ಮ ಸಂಘದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಯಾವ ಕ್ರಮಗಳನ್ನು ಕೈಗೊಂಡಿದ್ದೀರಿ?

ಇಲ್ಲ ಎಂದಾದರೆ ಕಾರಣ ತಿಳಿಸಿ

## ಅನುಬಂಧ-೨

# ಆಕರ ಗ್ರಂಥಗಳು

## I.

೧. ಅನುರಾಧಾ ಶರ್ಮಾ (೧೯೯೮): "ಎನ್ಸೈಕ್ಲೋಪಿಡಿಯಾ ಆಫ್ ಇಂಡಿಯನ್ ವಿಮೆನ್"

೨. ಕಿರಣ್ ಮೂರ್ತಿ : " (೨೦೦೧): " ಚಾಲೆಂಜಿಂಗ್ ಆಫ್ ಪರೆಂಟಿಂಗ್: ಇಂಪ್ಲಿಕೇಷನ್ ಆಫ್ ಮೆಟರ್ನಲ್ ಎಂಪ್ಲಾಯ್ಮೆಂಟ್ ಫಾರ್ ಸೈಕೋಲಜಿಕಲ್ ಡೆವೆಲಪ್ಮೆಂಟ್ ಆಫ್ ದ ಚಿಲ್ಡ್ರನ್", ಕಾನ್ಸೆಪ್ಟ್, ನ್ಯೂ ದೆಲ್ಲಿ

೩. ರಜನಿ.ಕೆ,ಮೂರ್ತಿ (೨೦೦೧): " ಬಿಲ್ಡಿಂಗ್ ವಿಮೆನ್ ಕ್ಯಪಾಸಿಟೀಸ್: ಇಂಟರ್ವೆನ್ಷನ್ಸ್ ಇನ್ ಜೆಂಡರ್ ಟ್ರಾನ್ಸ್ಫಾರ್ಮೇಷನ್", ಸೇಜ್ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೪. ರಾಜ್ ಕುಮಾರ್ ಪೃಥ್ವಿ, ರಾಮೇಶ್ವರಿ ದೇವಿ ಅಂಡ್ ರೊಮಿಳಾ ಪೃಥ್ವಿ (೨೦೦೧): "ಎಜ್ಯುಕೇಷನ್, ಎಂಪ್ಲಾಯ್ಮೆಂಟ್ ಅಂಡ್ ಎಂಪವರ್ಮೆಂಟ್ ಆಫ್ ವಿಮೆನ್", ಮಂಗಳ ದೀಪಾ ಪಬ್ಲಿಕೇಷನ್ಸ್, ಜೈಪುರ

೫. ಸುಧೀರ್.ಎಂ.ಎ. ಅಂಡ್ ಬಾಲಕೃಷ್ಣಾ. ಎ (೨೦೦೨): " ಎಂಪವರ್ಮೆಂಟ್ ಆಫ್ ರೂರಲ್ ವಿಮೆನ್", ಲೇಬರ್ ಫೋರ್ಸ್, ಅನ್ಮೋಲ್, ನ್ಯೂ ದೆಲ್ಲಿ

೬. ಅರುಣ್ ಕುಮಾರ್ (೨೦೦೨): " ಎಂಪವರಿಂಗ್ ವಿಮೆನ್", ಸರುಪ್, ನ್ಯೂ ದೆಲ್ಲಿ,

೭. ಇಂದೂ ಗ್ರೋವರ್ ಅಂಡ್ ದೀಪಕ್ ಗ್ರೋವರ್ (೨೦೦೨): " ಎಂಪಸರ್ಮೆಂಟ್ ಆಫ್ ವಿಮೆನ್", ಆಗ್ರೋಟೆಕ್, ಉದಯ್ಪುರ

೮. ಸುಜಿತ್ ಕುಮಾರ್ ದತ್ತಾ ಅಂಡ್ ದಿಲೀಪ್ ಕುಮಾರ್ ಘೋಷ್ (೨೦೦೨): "ಎಂಪವರಿಂಗ್ ಆಫ್ ರೂರಲ್ ವಿಮೆನ್", ಆಕಾಂಕ್ಷ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೯. ಆಶಾ ಮುಖರ್ಜಿ ಮತ್ತು ಕುಂಕುಂ ಭಟ್ಟಾಚಾರ್ಯ (೨೦೦೩): " ಕಂಡೀಷನಿಂಗ್ ಅಂಡ್ ಎಂಪವರ್ಮೆಂಟ್ ಆಫ್ ವಿಮೆನ್ : ಎ ಮಲ್ಟಿ ಡೈಮೆನ್ಷನಲ್ ಅಪ್ರೋಚ್, ಗ್ಯಾನ್ ಪಬ್ಲಿಕೇಷನ್, ನ್ಯೂ ದೆಲ್ಲಿ

೧೦.ಆಶಿನೆರಾಯ್ (೨೦೦೩):"ಡೆವೆಲಪ್ಮೆಂಟ್ ಆಫ್ ವಿಮೆನ್: ಆನ್ ಅಸೆಸ್ಮೆಂಟ್", ರಜತ್ ಪಬ್ಲಿಕೇಷನ್, ನ್ಯೂ ದೆಲ್ಲಿ

೧೧.ಅರುಣಾ. ಕೆ. ಗೋಯಲ್ (೨೦೦೪): " ಎಜ್ಯುಕೇಷನ್ಸ್ ಸೋಷಿಯೋ-ಎಕನಾಮಿಕ್ ಫರ್ಸಪೆಕ್ಟೀವಸ್ಸ್ ಆಫ್ ವಿಮೆನ್ ಡೆವೆಲಪ್ ಅಂಡ್ ಎಂಪವರ್ಮೆಂಟ್", ದೀಪ್ ಅಂಡ್ ದೀಪ್ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೧೨.ಅರುಣಾ ಗೋಯಲ್ (೨೦೦೪): " ಆರ್ಗನೈಜೇಷನ್ ಅಂಡ್ ಸ್ಟ್ರಕ್ಚರ್ ಆಫ್ ವಿಮೆನ್ ಡೆವೆಲಪ್ಮೆಂಟ್ ಅಂಡ್ ಎಂಪವರ್ಮೆಂಟ್", ದೀಪ್ ಅಂಡ್ ದೀಪ್ ನ್ಯೂ ದೆಲ್ಲಿ

೧೩.ಮೀನಾಕ್ಷಿ ಮೆಹಲೋತ್ರ (೨೦೦೪): "ಎಂಪವರ್ಮೆಂಟ್ ಆಫ್ ವಿಮೆನ್", ಇಷಾ, ನ್ಯೂ ದೆಲ್ಲಿ

೧೪.ಅರ್ಚನಾ ಘೋಷ್ ಮತ್ತು ಸ್ಟೇಫಾನೀ ತವಾ ಲಾಮಾ-ಕಿವಾಲ್ (೨೦೦೫): "ಡೆಮೋಕ್ರಟೈಜೇಷನ್ ಇನ್ ಪ್ರೋಗ್ರೆಸ್ಸ್ : ವಿಮೆನ್ ಅಂಡ್ ಲೋಕಲ್ ಪೊಲಿಟಿಕ್ಸ್ ಇನ್ ಅರ್ಬನ್ ಇಂಡಿಯಾ", ತುಳಿಕಾ ಪಬ್ಲಿಕೇಷನ್, ನ್ಯೂ ದೆಲ್ಲಿ

೧೫.ಪ್ರದೀಪ್.ಕೆ. ಜಾಮಿಕ್ (೨೦೦೫) : "ಎಂಪವರ್ಮೆಂಟ್ ಆಫ್ ರೂರಲ್ ವಿಮೆನ್-ಎ ಸ್ಟಡಿ ಅರ್ಕಸ್ ದ ತ್ರೀ ಸ್ಟೇಟ್ಸ್, ಜಾರ್ಖಂಡ್, ಒರಿಸ್ಸಾ ಅಂಡ್ ವೆಸ್ಟ್ ಬೆಂಗಾಲ್, ಆರ್ ಭಟ್ಟಾಚಾರ್ಯ, ಕೋಲ್ಕತ್ತ

೧೬.ಅನಿಲ್ ಭೂಯಾಲಿ ಮತ್ತು ಸಂಪಾ ಪೋತ್‌ದ್ದಾರ್ (೨೦೦೫): " ಡೆವೆಲಪ್ಮೆಂಟ್ ಆಫ್ ರೂರಲ್ ವಿಮೆನ್ ಥ್ರೋ ಎಜ್ಯುಕೇಷನ್ ಅಂಡ್ ಎಂಪ್ಲಾಯ್ಮೆಂಟ್", ಅಭಿಜಿತ್ ಪಬ್ಲಿಕೇಷನ್, ದೆಲ್ಲಿ

೧೭.ನಿರ್ಮಲ.ಜೆ. ಅಂಡ್ ವಿ.ದುಲಾಲಿ ಬಿರುಂಡ (೨೦೦೫): "ಎಂಪವರ್ಮೆಂಟ್ ಆಫ್ ವಿಮೆನ್", ಸೀರಿಯಲ್, ನ್ಯೂ ದೆಲ್ಲಿ

೧೮.ಸೀಮಾ ಶರ್ಮಾ ಅಂಡ್ ಕಾಂತ ಶರ್ಮಾ (೨೦೦೫): "ಎನ್ಸೈಕ್ಲೋಪಿಡಿಯಾ ಆಫ್ ಇಂಡಿಯನ್ ವಿಮೆನ್" ಅನ್ಮೋಲ್, ನ್ಯೂ ದೆಲ್ಲಿ

೧೯.ಕೋಟೇಶ್ವರ ರಾವ್.ಎಂ (೨೦೦೫): ""ಎಂಪವರ್ಮೆಂಟ್ ಆಫ್ ವಿಮೆನ್ ಇನ್ ಇಂಡಿಯಾ" ಡಿಸ್ಕವರಿ, ನ್ಯೂ ದೆಲ್ಲಿ

೨೦.ಶಾಂಭಶಿವಾ ರಾವ್.ಬಿ ಅಂಡ್ ಇಂದಿರಾ ಕುಮಾರಿ ವೈ (೨೦೦೫): ""ಎಂಪವರ್ಮೆಂಟ್ ಆಫ್ ವಿಮೆನ್ ಅಂಡ್ ರೂರಲ್ ಡೆವೆಲಪ್ಮೆಂಟ್" ಸೀರಿಯಲ್, ನ್ಯೂ ದೆಲ್ಲಿ

೨೧.ರಾವ್,ವಿ.ಎಂ.( ೨೦೦೫): " ಕೋ-ಆಪರೇಟಿವ್ ಅಂಡ್ ದೈರಿ ಡೆವೆಲಪ್ಮೆಂಟ್-ಚೇಂಜಿಂಗ್ ಡೆಸ್ಟಿನಿ ಆಫ್ ರೂರಲ್ ವಿಮೆನ್, ಮಿತಲ್ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೨೨.ಸಾಮಂತ್,ಆರ್.ಕೆ (೨೦೦೫): " ಎಂಪವರಿಂಗ್ ರೂರಲ್ ವಿಮೆನ್: ಇಷ್ಯೂ ಆಪರ್ಚ್ಯುನಿಟೀಸ್ ಅಂಡ್ ಅಪ್ರೋಚಸ್ಸ್, ದ ವಿಮೆನ್ ಪ್ರೆಸ್ಸ್, ದೆಲ್ಲಿ

೨೩.ಅನ್ನಾ ಜೇಮ್ಸನ್ (೨೦೦೬): " ಕ್ಯಾರೆಕ್ಟರಿಸ್ಟಿಕ್ ಆಫ್ ವಿಮೆನ್ : ಮೊರಲ್ ಪೊಲಿಟಿಕಲ್ ಅಂಡ್ ಹಿಸ್ಟಾರಿಕಲ್" ಕಾಸ್ಮೊ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೨೪.ಅನಿತಾ ಸ್ಟೀಫೆನ್ (೨೦೦೬):"ಕಮ್ಯುನಿಕೇಷನ್ ಟೆಕ್ನಾಲಜೀಸ್ ಅಂಡ್ ವಿಮೆನ್ ಎಂಪವರ್ಮೆಂಟ್", ರಜತ್ ಪಬ್ಲಿಕೇಷನ್, ನ್ಯೂ ದೆಲ್ಲಿ

೨೫.ಅನುರಾಧಾ ಮತ್ತು ರಾಮೇಶ್ವರಿ ಪಾಂಡ್ಯಾ (೨೦೦೬): " ಫ್ಯಾಸೆಟ್ಸ್ ಆಫ್ ವಿಮೆನ್ಸ್ ಡೆವೆಲಪ್ಮೆಂಟ್, ಕಲ್ಪಜಾ, ದೆಲ್ಲಿ

೨೬.ಶ್ರೀ ರಾಮುಲು.ಜಿ (೨೦೦೬): "ಎಂಪವರ್ಮೆಂಟ್ ಆಫ್ ವಿಮೆನ್ ಥ್ರೋ ಶೆಲ್ಪ್ ಹೆಲ್ಪ್ ಗ್ರೂಪ್ಸ್", ಕಲ್ಪಜಾ, ದೆಲ್ಲಿ

೨೭.ಶಾಹೂ.ಆರ್.ಕೆ ಅಂಡ್ ಎಸ್.ಎನ್ ತ್ರಿಪತಿ (೨೦೦೬) : "ಷಲ್ಪ್ ಹೆಲ್ಪ್ ಗ್ರೂಪ್ಸ್ ಅಂಡ್ ವಿಮೆನ್ ಎಂಪವರ್ಮೆಂಟ್, ಅನ್ಮೋಲ್, ನ್ಯೂ ದೆಲ್ಲಿ

೨೮.ಸುಗುಣಾ.ಬಿ. (೨೦೦೬) : "ಎಂಪವರ್ಮೆಂಟ್ ಆಫ್ ರೂರಲ್ ವಿಮೆನ್ ಥ್ರೋ ಷಲ್ಪ್ ಹೆಲ್ಪ್ ಗ್ರೂಪ್ಸ್" ಡಿಸ್ಕವರಿ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೨೯.ಅಬ್ಬಾ ಜೈನ್ ಮತ್ತು ಶಾಲಿನಿ ಶೇಖಾವತ್ (೨೦೦೭): " ಅಡ್ಮಿನಿಸ್ಟ್ರೇಷನ್ ಫಾರ್ ಎಂಪವರ್ಮೆಂಟ್ ಅಂಡ್ ವೆಲ್ಫೇರ್ ಆಫ್ ವಿಮೆನ್", ಅಲೇಖ್ ಪಬ್ಲಿಕೇಷನ್ಸ್, ಜೈಪುರ

೩೦.ವಿದ್ಯಾ.ಕೆ.ಸಿ (೨೦೦೭): "ಪೊಲಿಟಿಕಲ್ ಎಂಪವರ್ಮೆಂಟ್ ಆಫ್ ವಿಮೆನ್ ಅಟ್ ದ ಗ್ರಾಸ್ರೂಟ್ಸ್", ಕಾನಿಷ್ಕಾ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೩೧.ನಾರಾಯಣ ಸ್ವಾಮಿ.ಬಿ, ಆರ್.ಕೆ. ಸಾವಂತ್ ಅಂಡ್ ಕೆ.ನಾರಾಯಣಗೌಡ (೨೦೦೭) ಷೆಲ್ಪ್ ಹೆಲ್ಪ್ ಗ್ರೂಪ್ಸ್ ; ಕಿ, ಟು ಎಂಪವರ್ಮೆಂಟ್ ಆಫ್ ರೂರಲ್ ವಿಮೆನ್", ದ ವಿಮೆನ್ ಪ್ರೆಸ್ಸ್, ದೆಲಿ

೩೨.ನಿರೋಜ್ ಸಿನ್ಹಾ (೨೦೦೭): ""ಎಂಪವರ್ಮೆಂಟ್ ಆಫ್ ವಿಮೆನ್ ಥ್ರೋ ಪೊಲಿಟಿಕಲ್ ಪಾರ್ಟಿಸಿಪೇಷನ್", ಕಲ್ಪಜಾ ಪಬ್ಲಿಕೇಷನ್, ದೆಲ್ಲಿ

೩೩.ಸುಶ್ಮಾ ಶ್ರೀವತ್ಸವ (೨೦೦೭) : "ಎನ್ಸೈಕ್ಲೋಪೀಡಿಯಾ ಆಫ್ ವಿಮೆನ್ ಅಂಡ್ ಡೆವೆಲಪ್ಮೆಂಟ್", ಕಾಮನ್ವೆಲ್ತ್ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೩೪.ಗಣೇಶ ಮೂರ್ತಿ.ವಿ.ಎಸ್ (೨೦೦೮): "ಎಂಪವರ್ಮೆಂಟ್ ಆಫ್ ವಿಮೆನ್ ಇನ್ ಇಂಡಿಯಾ-ಸೋಷಿಯಲ್, ಎಕನಾಮಿಕ್ ಅಂಡ್ ಪೊಲಿಟಿಕಲ್, ನ್ಯೂ ಸೆಂಚುರಿ ಪಬ್ಲಿಕೇಷನ್ಸ್, ನ್ಯೂ ದೆಲ್ಲಿ

೩೫.ಗೀತಾಸಿಂಗ್ ಅಂಡ್ ಎಸ್,ನಾರಾಯಣ ( ೨೦೦೮): "ಎಂಪವರ್ಮೆಂಟ್ ಆಫ್ ವಿಮೆನ್ ಥ್ರೋ ಪಂಚಾಯತ್ ರಾಜ್ ಇನ್ಸ್ಟಿಟ್ಯೂಷನ್ಸ್: ಎ ಸ್ಟಡೀ, ಕೋಲ್ಕಟ

## II. ಲೇಖನಗಳು

೧. ಅನ್ನಾಸ್.ಜೆ (೧೯೯೩): " ವಿಮೆನ್ ಅಂಡ್ ದ ಕ್ವಾಲಟಿ ಆಫ್ ಲೈಫ್" ಐಡಿಎಸ್ ಬುಲೆಟಿನ್, ವ್ಯಾಲುಂ.೨೬, ನಂ.೩

೨. ಮಯೂಕ್ಸ್,ಎಲ್ (೧೯೯೭): " ದ ಮ್ಯಾಜಿಕ್ ಇನ್ಗ್ರೇಡಿಯಂಟ್? ಮೈಕ್ರೋಫೈನಾನ್ಸ್ ಅಂಡ್ ವಿಮೆನ್ ಎಂಪಾವರ್ಮೆಂಟ್, ಎ ಬ್ರೀಫಿಂಗ್ ಪೇಪರ್ ಪ್ರಪೇರ್ಡ್ ಫಾರ್ ದ ಮೈಕ್ರೋ ಕ್ರೆಡಿಟ್ ಸಮಿತಿ, ವಾಷಿಂಗ್ಟನ್

೩. ಪಿಟ್,ಎಂ ಅಂಡ್ ಎಸ್.ಆರ್.ಖಂಡೇಕರ್ (೧೯೯೮): " ದ ಇಮಪ್ಯಾಕ್ಟ್ ಆಫ್ ಗ್ರೂಫ್-ಬೆಸ್ಟ್ ಕ್ರೆಡಿಟ್ ಪ್ರೊಗ್ರಾಮ್ಸ್ ಅನ್ ಪೂರ್ ಹೌಸ್ ಹೋಲ್ಡ್ ಇನ್ ಬಾಂಗ್ಲಾದೇಶ" ಜರ್ನಲ್ ಆಫ್ ಪೊಲಿಟಿಕಲ್ ಎಕಾನಮಿ ವ್ಯಾಲುಂ.೧೦೬: ಪು. ೯೫೮-೯೯೬

೪. ಬೆಟೆಇಲ್ಲಿ, ಎ. (೧೯೯೯): "ಎಂಪವರ್ಮೆಂಟ್" *'ಎಕಾನಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ'* ಮರ್ಚ.೬

೫. ಕೊಲೆಮ್ಯಾನ್,ಬಿ. (೧೯೯೯): " ದ ಇಂಪ್ಯಾಕ್ಟ್ ಆಫ್ ಗ್ರೂಪ್ ಲೆಂಡಿಂಗ್ ಇನ ಥೈಲ್ಯಾಂಡ್", 'ಜರ್ನಲ್ ಆಫ್ ಡೆವೆಲಪ್ಮೆಂಟ್ ಎಕಾನಮಿಕ್ಸ್'(೬೦) ೨; ೧೦೫-೧೪೨

೬. ಗೊಯೆಟ್ಜ,ಎ,ಎಂ ಅಂಡ್ ಗುಪ್ತಾ ಆರ್,ಎಸ್.(೧೯೯೬) : " ಹು ಟೇಕ್ ದ ಕ್ರೆಡಿಟ್? ಜಂಡ್ ಪಾವರ್ ಅಂಡ್ ಕಂಟ್ರೋಲ್ ವಿಮೆನ್ ಇನ್ ರೂರಲ್ ಕ್ರೆಡಿಟ್ ಪೋಗ್ರಾಮ್ಸ್ ಇನ್ ಬಾಂಗ್ಲಾದೇಶ", ವರ್ಲ್ಡ ದೆವೆಲಪ್ಮೆಂಟ್, ವ್ಯಾಲುಂ.೨೪, ನಂ.೧

೭. ಮಯೂಕ್ಸ್,ಎಲ್ (೨೦೦೧): " ಟ್ಯಾಕ್ಲಿಂಗ್ ದ ಡೌನ್ ಸೈಡ್: ಸೋಶಿಯಲ್ ಕ್ಯಾಪಿಟಲ್, ವಿಮೆನ್ ಎಂಪಾವರ್ಮೆಂಟ್ ಅಂಡ್ ಮೈಕ್ರೊಫೈನಾನ್ಸ್ ಇನ್ ಕ್ಯಾಮೆರುನ್", ಡೆವಲಪ್ಮೆಂಟ್ ಅಂಡ್ ಚೇಂಜ್, ವ್ಯಾಲುಂ.೩೨

೮. ಗ್ರುಟಾಎರ್ಟ್ಸ್,ಸಿ (೨೦೦೩): " ಆನ್ ದ ರಿಲೆಷನ್‌ಶಿಫ್ ಬಿಟ್ವೀನ್ ಎಂಪಾವರ್ಮೆಂಟ್, ಸೋಶಿಯಲ್ ಕ್ಯಾಪಿಟಲ್ ಅಂಡ್ ಕಮ್ಯುನಿಟಿ ಡೆವೆಲಪ್ಮೆಂಟ್", ವರ್ಲ್ಡ ಬ್ಯಾಂಕ್ ವರ್ಕಿಂಗ್ ಪೇಪರ್, ನಂ.೩೩೦೭೪, ವಾಶಿಂಗ್ಟನ್ ಡಿ.ಸಿ.

೯. ಪಿಟ್,ಎಂ ಅಂಡ್ ಎಸ್.ಆರ್.ಖಂಡೇಕರ್ ( ೨೦೦೬): "ಎಂಪವರಿಂಗ್ ವಿಮೆನ್ ವಿತ್ ಮೈಕ್ರೊಫೈನಾನ್ಸ್: ಎವ್ಹಿಡೆನ್ಸ್ ಫ್ರಾಮ್ ಬಾಂಗ್ಲಾದೇಶ", ಎಕಾನಮಿಕ್ ಡೆವೆಲಪ್ಮೆಂಟ್ ಅಂಡ್ ಕಲ್ಚರ್ ಚೇಂಜ್, ಪು. ೭೯೧- ೮೩೧